# PACKAGE TOURS

**Hotel Room Accom. & South Indian Veg. Food**

## AMARNATH & VAISHNAVI DEVI YATRA




**19/09 DAYS**

Delhi, Amritsar, Attari Border, Amarnath, Srinagar, Gulmarg, Vaishnavi Devi, Kurukshetra

**JUNE 28, JULY 04**

## CHARODHAM & KASHI GAYA PRAYAG YATRA



**19/26 DAYS**

Haridwar, Yamunotri, Gangotri, Uttarkashi, Kedar, Triyugi (Optional), Mana, Vyasa Guha, Ganesh Guha, Keshava Prayag, Badari, Rishikesh, New Delhi, Allahabad, Ayodhya, Saranath, Gaya, Bodhgaya, Kashi

**MAY 09 JUNE 06**

## HOLY KAILASH & MANASA SAROVAR YATRA

**13 DAYS**

**May / June / July**





# Shri Hansaa Travels

**Recognised by Department of Tourism, Govt. of Karnataka**


: 640, 40th Cross, 8th Block, Jayanagar, Bangalore - 70

: hansaatravels@gmail.com : hansaatravels.com

080-26643276 / 26543891 / 9341215612 / 9341415612

ಅಕ್ಷರ ಜೋಡಣೆ
ಶ್ರೀರಾಮಕೃಷ್ಣ ಆಶ್ರಮ, ಮೈಸೂರು
ಮುದ್ರಣ
ಮಯೂರ್ ಗ್ರಾಫಿಕ್ಸ್, ಬೆಂಗಳೂರು

E-mail: mysuru.vivekaprabha@rkmm.org
Website: vivekaprabha.net
ಫೋನ್ : 9481533505

ಮುಖಪುಟ:
'ಈಶಾವಾಸ್ಯಮಿದಂ ಸರ್ವಂ'

ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ

ಚಂದಾ ವಿವರ

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ) : ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.
ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ) : $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ಮಾರ್ಚ್-2016 ಸಂಪುಟ 17 ಸಂಚಿಕೆ 03



# ವಿವೇಕ ಪ್ರಭ


ಪರಿವಿಡಿ


4 ಪ್ರಾರ್ಥನೆ : ಶ್ರೀ ರಾಮಕೃಷ್ಣ ಪ್ರಶಸ್ತಿ
ಸೂಕ್ತಿಪ್ರಭ
7 ಸಂಪಾದಕೀಯ: ಮಾನವ : ಹೊಸ ಜಗತ್ತಿನಲ್ಲಿ
10 ಶ್ರೀರಾಮಕೃಷ್ಣ ವಚನವೇದದಿಂದ: ಸರಳತೆ
26 ಜಪಾನಿನ ಕಥೆಗಳು: ಮುಗಿಲು ಮುಟ್ಟಿದ ಬಿದಿರು ಗಿಡ
35 ಪುಸ್ತಕ ಪರಿಚಯ: ಡಾ.ಸಿ.ಪಿ.ಕೆ. ಅವರ ಎರಡು ಕೃತಿಗಳು
42 ಸುದ್ದಿ ಸಂಚಯ




11 ವಿಶೇಷ ಲೇಖನ
ನೌಮಿ ಗುರುವಿವೇಕಾನಂದಮ್
ಸ್ವಾಮಿ ಚೇತನಾನಂದ



17 ವಿಶೇಷ ಲೇಖನ
ಅಧ್ಯಯನ ಮತ್ತು ಕ್ರಿಯಾಶೀಲತೆ : ಒಂದು ಚಿಂತನೆ
ಸರಗೂರು ರಮೇಶ್



31 ಸಂತರ ಜೀವನ ಕಥೆ
ಅಸ್ಸಾಮಿನ ಅಧ್ಯಾತ್ಮ ಜ್ಯೋತಿ ಶ್ರೀಮಂತ ಶಂಕರದೇವ
ಸ್ವಾಮಿ ವೀರೇಶಾನಂದ





20 ಧಾರಾವಾಹಿ
ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ – ಭಾಗ 16
ಸ್ವಾಮಿ ನಿರಾಮಯಾನಂದ

38 ಚಿತ್ರಕಥೆ: ಪುಷ್ಪದಂತ ಮಹರ್ಷಿ



27 ವಿಶೇಷ ಲೇಖನ
ದಿವ್ಯ ದಂಪತಿಗಳ ದಿವ್ಯ ಲೀಲೆ
ಸಿ.ಎಸ್. ಮಂಗಳಮ್ಮ



ಪ್ರಾರ್ಥನೆ

# ಶ್ರೀರಾಮಕೃಷ್ಣ ಪ್ರಶಸ್ತಿಃ ॥

**ಕ್ಷೀಣಾಃ ಸ್ಮ ದೀನಾಃ ಸಕರುಣಾ ಜಲ್ಪಂತಿ ಮೂಢಾ ಜನಾಃ**
**ನಾಸ್ತಿಕ್ಯಂತ್ವಿದಂತು ಅಹಹ ದೇಹಾತ್ಮವಾದಾತುರಾಃ ।**
**ಪ್ರಾಪ್ತಾಃ ಸ್ಮ ವೀರಾ ಗತಭಯಾ ಅಭಯಂ ಪ್ರತಿಷ್ಠಾಂ ಯದಾ**
**ಆಸ್ತಿಕ್ಯಂತ್ವಿದಂತು ಚಿನುಮಃ ರಾಮಕೃಷ್ಣದಾಸಾ ವಯಮ್ ॥**

ಮೂಢರು ದೇಹವೇ ತಾವೆಂದು ಭ್ರಮಿಸಿ, ದುರ್ಬಲರು ನಾವು, ದೀನರು ನಾವು ಎಂದು ಅಳುವರು. ಇದೆಲ್ಲ ನಾಸ್ತಿಕತೆ. ಭಯದಾಚೆ ಇರುವ ಗತಿಯನ್ನು ನಾವು ಹೊಂದಿರುವೆವು. ಇನ್ನು ಮೇಲೆ ಯಾವ ಭಯವೂ ಇಲ್ಲ. ಧೀರರಾಗೋಣ. ಶ್ರೀರಾಮ ಕೃಷ್ಣರ ದಾಸರಾದ ನಾವು ಸ್ವೀಕರಿಸುವ ಆಸ್ತಿಕತನವಿದು.

**ಪೀತ್ವಾ ಪೀತ್ವಾ ಪರಮಮಮೃತಂ ವೀತಸಂಸಾರರಾಗಾಃ**
**ಹಿತ್ವಾ ಹಿತ್ವಾ ಸಕಲಕಲಹಪ್ರಾಪಿಣೀಂ ಸ್ವಾರ್ಥಸಿದ್ಧಿಮ್ ।**
**ಧ್ಯಾತ್ವಾ ಧ್ಯಾತ್ವಾ ಗುರುವರಪದಂ ಸರ್ವಕಲ್ಯಾಣರೂಪಮ್**
**ನತ್ವಾ ನತ್ವಾ ಸಕಲಭುವನಂ ಪಾತುಮಾಮಂತ್ರಯಾಮಃ ॥**

ಸಂಸಾರದ ಮೇಲಿನ ಆಸೆಯೆಲ್ಲವನ್ನೂ ತೊರೆದು ಅನವರತವೂ ಅಮರತ್ವದ ಅಮೃತಾನಂದವನ್ನು ಪಾನ ಮಾಡುತ್ತ, ಮೋಹಕ್ಕೆ ಮೂಲವಾದ ಸ್ವಾರ್ಥಪರತೆಯನ್ನು ತೊರೆದು, ಸರ್ವ ಕಲ್ಯಾಣರೂಪನಾದ ಗುರುದೇವನ ಪಾದಕಮಲಗಳನ್ನು ಧ್ಯಾನಿಸುತ್ತ ಅನಂತ ವಂದನೆಗಳನ್ನು ಮಾಡಿ, ಜಗತ್ತೆಲ್ಲವನ್ನೂ ಈ ಅಮೃತಪಾನದಲ್ಲಿ ಭಾಗಿಗಳಾಗಿ ಎಂದು ಬೇಡುತ್ತೇವೆ.



**ಪ್ರಾಪ್ತಂ ಯದ್ವೈ ತ್ವನಾದಿನಿಧನಂ ವೇದೋದಧಿಂ ಮಥಿತ್ವಾ**
**ದತ್ತಂ ಯಸ್ಯ ಪ್ರಕರಣೇ ಹರಿಹರಬ್ರಹ್ಮಾದಿದೇವೈರ್ಬಲಮ್।**
**ಪೂರ್ಣಂ ಯತ್ತು ಪ್ರಾಣಸಾರೈರ್ಭೌಮನಾರಾಯಣಾನಾಮ್**
**ರಾಮಕೃಷ್ಣಸ್ತನುಂ ಧತ್ತೇ ತತ್ಪೂರ್ಣಪಾತ್ರಮಿದಂ ಭೋಃ ॥**

ಈ ಅಮೃತವು ಅನಂತ ವೇದರಾಶಿಯ ಮಂಥನದಿಂದ ಉದ್ಭವಿಸಿತು. ಇದಕ್ಕೆ ಬ್ರಹ್ಮ ವಿಷ್ಣು ಮಹೇಶ್ವರಾದಿ ದೇವತೆಗಳೆಲ್ಲರೂ ತಮ್ಮ ಸರ್ವಸ್ವವನ್ನೂ ಧಾರೆ ಎರೆದಿರುವರು. ಮಹಾ ಅವತಾರಗಳ ತಪೋಶಕ್ತಿಯಿಂದ ಇದು ಪೋಷಿತವಾಗಿರುವುದು. ಶ್ರೀರಾಮಕೃಷ್ಣರು ಅಂತಹ ಅಮೃತವನ್ನು ಕಲಶದಲ್ಲಿ ತುಂಬಿ ದಾನ ಮಾಡುವುದಕ್ಕೆ ನಿಂತಿರುವರು.

**– ಸ್ವಾಮಿ ವಿವೇಕಾನಂದ**

*(ತಮ್ಮ ಒಬ್ಬ ಗುರುಭಾಯಿಗೆ ಬರೆದ ಪತ್ರದಿಂದ)*

ಸೂಕ್ತಿಪ್ರಭ

**ಕೊ**ಳೆ ಮತ್ತು ಕೆಸರಿನಿಂದ ಮೈಲಿಗೆ ಮಾಡಿಕೊಳ್ಳುವುದು ಮಕ್ಕಳ ಸ್ವಭಾವ. ಆದರೆ ತಂದೆತಾಯಿಗಳು ಮೈಲಿಗೆಯಲ್ಲಿ ಇರುವಂತೆ ಬಿಡುವುದಿಲ್ಲ. ಇದರಂತೆಯೇ ಪ್ರಪಂಚದ ಪ್ರಲೋಭನೆಗಳಿಗೆ ಸಿಕ್ಕಿ ಮನುಷ್ಯನು ಎಷ್ಟು ಕೊಳೆಯಾಗಿದ್ದರೂ ಕೂಡ ಪರಿಶುದ್ಧ ರಾಗುವುದಕ್ಕೆ ದೇವರು ಅವಕಾಶವನ್ನು ಕಲ್ಪಿಸುತ್ತಾನೆ.

*–ಶ್ರೀರಾಮಕೃಷ್ಣ*

**ದೇ**ವರೊಂದಿಗೆ ಸತತವೂ ಸಂಭಾಷಣೆ ನಡೆಸುವುದಕ್ಕಿಂತ ಮಧುರವೂ ಆನಂದದಾಯಕವೂ ಆದ ಜೀವನ ಈ ಜಗತ್ತಿನಲ್ಲಿ ಬೇರೊಂದಿಲ್ಲ. ಇದನ್ನು ಯಾರು ಅಭ್ಯಾಸ ಮಾಡುವರೋ, ಯಾರು ಅನುಭವಿಸುವರೋ ಅವರು ಮಾತ್ರ ಈ ವಿಷಯವನ್ನು ಗ್ರಹಿಸಬಲ್ಲರು.

*– ಬ್ರದರ್ ಲಾರೆನ್ಸ್*

**ಪ್ರ**ತಿಯೊಂದಕ್ಕೂ ಅದರದೇ ಆದ ಸೌಂದರ್ಯವಿರುತ್ತದೆ. ಆದರೆ ಎಲ್ಲರೂ ಅದನ್ನು ಕಾಣುವುದಿಲ್ಲ, ಅಷ್ಟೇ.

*–ಕನಫ್ಯೂಶಿಯಸ್*

**ಮ**ನುಷ್ಯರೇ! ಸತತವಾಗಿ ಎಚ್ಚರದಿಂದಿರಿ. ಯಾರು ಎಚ್ಚರ ವಾಗಿರುವನೋ, ಅವನ ಬುದ್ಧಿ ಬೆಳೆಯುತ್ತದೆ. ಯಾರು ಮಲಗಿರುತ್ತಾನೊ ಅವನು ಧನ್ಯನಲ್ಲ, ಯಾರು ಯಾವಾಗಲೂ ಎಚ್ಚರದಿಂದಿರುವನೊ ಅವನೇ ಧನ್ಯನು.

*– ಮಹಾವೀರ*

**ಭ**ಯವೇ ಎಲ್ಲ ಮೂಢನಂಬಿಕೆಗಳ ಮೂಲ. ಅದೇ ಎಲ್ಲ ಕ್ರೌರ್ಯಗಳಿಗೂ ಮೂಲ. ಭಯವನ್ನು ಗೆಲ್ಲುವುದೇ ಅರಿವಿನ ಮೊದಲ ಹೆಜ್ಜೆ.

*–ಬರ್ಟ್ರಾಂಡ್ ರಸೆಲ್*

**ಯಾ**ವುದು ಇರುವುದೋ ಅದನ್ನು ಕುರಿತು ಮಾತ್ರ ನಾವು ಮಾತನಾಡಬಲ್ಲೆವು, ಚಿಂತಿಸಬಲ್ಲೆವು. ಯಾವುದು ಇರುವುದೋ ಅದು ಸೃಷ್ಟಿಸಿದ್ದಲ್ಲ, ನಾಶವಾಗುವಂತಹದಲ್ಲ. ಅದು ಪೂರ್ಣವೂ, ಬದಲಾಗದ್ದೂ ಸಮಗ್ರವೂ ಆಗಿದೆ. ಈಗ ಇರುವುದಕ್ಕಿಂತ ಅದು ಬೇರೆ ಆಗಿರಲಿಲ್ಲ, ಬೇರೆ ಆಗುವುದಿಲ್ಲ; ಅದು ಒಂದೇ ಆಗಿರುತ್ತದೆ ಹಾಗೂ ನಿರಂತರವಾಗಿರುತ್ತದೆ.

*– ಪಾರ್ಮೆನೈಡಿಸ್*






Universal Sompo
General Insurance Co. Ltd.
Suraksha Hamesha Aapke Saath

# KBL SURAKSHA

**A Unique Personal Accident Insurance Scheme for SB Account Holders**

*Choose any one plan*

| Plan A | Plan B |
|---|---|
| ₹5,00,000 (Sum Insured) | ₹10,00,000 (Sum Insured) |
| ₹50 +Service Tax (Annual Premium) | ₹100 +Service Tax (Annual Premium) |

Coverage: Accidental Death only*

## SALIENT FEATURES

Eligibility : SB Account holder
Entry Age : 18-70 years
Term : 1 year and renewable every year thereafter [Auto Debit facility available for renewal]
Premium : Yearly

*Terms and Conditions apply

*'Buy Today to secure your family Tomorrow'*

For more details, please contact your nearest Branch




## TERMS AND CONDITIONS

- Coverage: Accidental Death only*
- Eligibility: Savings Bank Account holder
- Entry Age: 18 to 70 years
- The max. renewal age will be upto 75 years subject to payment of renewal premium on or before the expiry of the master policy.
- A Saving account holder can enroll during the tenure of the master policy by paying full annual premium plus applicable service tax.
- The eligible savings bank account holder can choose any one plan [**Plan A** OR **Plan B**].

## ELIGIBLE SB SCHEMES

- **SB GENERAL** (FOR GENERAL PUBLIC)
- **KBL VANITHA** (FOR WOMEN)
- **KBL TARUN** (FOR STUDENTS BETWEEN 18 & 25 YEARS)
- **KBL SALARY PRIVILEGE** (FOR SALARIED PERSONS)
- **SB SUGAMA** (BASIC SAVINGS BANK DEPOSIT ACCOUNT)
- **SB-ILSB** (INSURANCE LINKED SB ACCOUNT)
- **SB MONEY SAPPHIRE** (PRIVILEGE ACCOUNT)
- **SB MONEY RUBY** (PRIVILEGE ACCOUNT FOR HNIs')
- **SB MONEY PLATINUM** (PRIVILEGE ACCOUNT HNIs')

*Terms and Conditions apply

### CLAIM PROCEDURE

In case of accidental death of insured, the same should be intimated immediately to the **M/s Universal Sompo General Insurance Co. Ltd. (USGICL)** and a written complaint should be lodged at the nearest police station. A copy of First Information Report (FIR) along with other documents should be submitted immediately to **USGICL** by the nominee through **KBL Base Branch** for further processing.

### REGISTRATION OF CLAIMS

e-mail : contactclaims@universalsompo.com
Toll Free number : 1800 22 4030, 1800 200 4030 (from MTNL & BSNL Lines)
Helpline number : 022-27639800, 022-39133700

**BANK'S RIGHTS:** The coverage of personal accident insurance cover will be subject to the terms and conditions as well as expiry period of the master policy taken by bank and continuation of this facility will be at the sole discretion of the bank. Bank reserves all the rights.

**Eng / Health-PA / Brochure / 107 / Dec 2015 |** IRDAI Regd. No. 134 | Regd Office: Universal Sompo General Insurance Co. Ltd.Unit No 401, 4th floor, Sangam Complex,127, Andheri Kurla Road, Andheri (E), Mumbai - 400 059. | Board Line - 022-29211800 | Fax# 022-29211844 | CIN# U66010MH2007PLC166770 Email: contactus@universalsompo.com | **Insurance is the subject matter of solicitation.** | For more details on risk factors, terms and conditions please read sales brochure carefully before concluding a sale. | "IRDAI or its officials do not involve in activities like sale of any kind of insurance or financial products nor invest premiums" | "IRDAI does not announce any bonus" | "Those receiving such phone calls are requested to lodge a police complaint along with details of phone call and number". | IRDAI UIN NO. IRDA/USGI/10/2007-08/PA/LR/01

**The above information is indicative in nature.**
**For more details please contact your nearest branch.**






# Karnataka Bank Ltd.,

**CA No. 1, "C" Block, Akkamahadevi Road,**
**J.P. Nagar, Mysore - 570 008**
**mys.jpnagar@ktkbank.com; Ph: 0821-2371550, 2371551**

ಸಂಪಾದಕೀಯ

# ಮಾನವ : ಹೊಸ ಜಗತ್ತಿನಲ್ಲಿ



### ಕಳೆದು ಹೋದ ಮಾನವ

'ಮಾನವ ಜನ್ಮ ದೊಡ್ಡದು' ಎಂದು ಪುರಂದರದಾಸರು ಹಾಡಿದರು. ಭಗವಂತನ ಈ ಸೃಷ್ಟಿಯಲ್ಲಿ ಬೇರೆ ಯಾವ ಜೀವಿಗೂ ಲಭಿಸದ ವಿಶಿಷ್ಟ ಸಾಮರ್ಥ್ಯ, ಬುದ್ಧಿ-ಮನಸ್ಸು-ಭಾವನೆಗಳ ಅತಿಸೂಕ್ಷ್ಮ ಸಂಯೋಜನೆ ಮಾನವನದು. ಸಾಧನೆಯ ಮೂಲಕ ಅಲೌಕಿಕ ಸತ್ಯಗಳನ್ನರಿಯುವ, ಜನ್ಮಜನ್ಮಾಂತರದ ಬಂಧನದಿಂದ ಬಿಡಿಸಿಕೊಳ್ಳುವ, ಶಾಶ್ವತವಾದ ದಿವ್ಯ ನೆಲೆಗೇರುವ ಹಾಗೂ ಅದರಿಂದ ಬ್ರಹ್ಮಾನಂದವನ್ನು ಹೊಂದುವ ಸಾಧ್ಯತೆ ಕೇವಲ ಮನುಷ್ಯನಿಗೆ ಮಾತ್ರ. ಚಿಂತಿಸುವ, ವಿಶ್ಲೇಷಿಸುವ, ಅರಿತುಕೊಳ್ಳುವ ಹಾಗೂ ನೆನಪಿನಲ್ಲಿ ಹಿಡಿದಿಟ್ಟುಕೊಳ್ಳುವ ಮಾನಸಿಕ ಶಕ್ತಿಗಳಿಂದ ಇಡೀ ಪ್ರಕೃತಿಯನ್ನು ನಿಯಂತ್ರಿಸಿಕೊಂಡ ಮಾನವನು ತನ್ನ ಉನ್ನತ ಆದರ್ಶಗಳನ್ನು ಮರೆತು, ಪ್ರಾಣಿಸಹಜವಾದ ಗುಣಗಳನ್ನು ಮತ್ತೆ ಪ್ರದರ್ಶಿಸುತ್ತಿದ್ದಾನೆಯೆ? ಜಗತ್ತಿನಲ್ಲಿ ಈಚಿನ ದಿನಗಳಲ್ಲಿ ಹೆಚ್ಚುತ್ತಿರುವ ಕ್ರೌರ್ಯ, ಸ್ವಾರ್ಥಬುದ್ಧಿ, ವಿಷಯಲೋಲುಪತೆ, ಬಿಕ್ಕಟ್ಟು, ವಿನಾಶಕಾರೀ ಕೃತ್ಯಗಳನ್ನು ಗಮನಿಸಿದಾಗ ಹೀಗೆನ್ನಿಸುವುದು ಸಹಜ. ಮಾನವನು ತನ್ನ ಮಹಿಮೆಯನ್ನು ಮರೆತಾಗಲೆಲ್ಲ ಪ್ರಪಂಚದಲ್ಲಿ ಮಹಾವಿಪತ್ತುಗಳು ಎದುರಾದವು. ಅವುಗಳ ದುಷ್ಪರಿಣಾಮವನ್ನು ಅನುಭವಿಸಿ, ಸಾವು ನೋವು ದುಃಖ ಆಕ್ರಂದನಗಳ ಹಾಹಾಕಾರವೆದ್ದಾಗಲೇ ಅವನಿಗೆ ಶಾಂತಿ, ನೆಮ್ಮದಿ, ಸಹಬಾಳ್ವೆ ಇವುಗಳ ನೆನಪಾಗುವುದು. 'ಕೆಟ್ಟ ಮೇಲೆ ಬುದ್ಧಿ' ಎನ್ನುವುದೇ ಮಾನವನ ದುರಂತ.

ಈಗಿನ ಸಮಾಜವನ್ನೇ ಗಮನಿಸೋಣ. ವೈಜ್ಞಾನಿಕ, ತಾಂತ್ರಿಕ ಪ್ರಗತಿಯ ವೈಭವದಲ್ಲಿ ಮಾನವ ಕುಬ್ಜನಾಗಿದ್ದಾನೆ. ಬೃಹದಾಕಾರದ ಬಹುಮಹಡಿಯ ಕಟ್ಟಡ, ವಾಹನಗಳ ಮಹಾಪೂರ, ಜನದಟ್ಟಣೆಯ ನಗರಗಳು, ವಾಣಿಜ್ಯೀಕರಣದ ಪೈಪೋಟಿ, ಸುದ್ದಿ ಮಾಧ್ಯಮಗಳ ಗದ್ದಲ... ಇವುಗಳ ನಡುವೆ ನಾನೆಲ್ಲಿದ್ದೇನೆ, ನನ್ನನ್ನು ಯಾರು ಕೇಳುವವನು? - ಎಂದು ಸಾಮಾನ್ಯ ವ್ಯಕ್ತಿಯೊಬ್ಬ ನಿಟ್ಟುಸಿರು ಬಿಡಬೇಕು. ರಸ್ತೆಯಲ್ಲಿ ನಡೆಯುವ ವೇಳೆಗೆ ತಲೆಸುತ್ತಿ ಬಂದು ಬಿದ್ದುಬಿಟ್ಟರೆ, 'ಯಾರೋ ಗತಿಗೋತ್ರವಿಲ್ಲದವ ಬಿದ್ದುಬಿಟ್ಟಿದ್ದಾನೆ...' ಎಂದು ಹೇಳುತ್ತಲೇ ನೂರಾರು ಮಂದಿ ದಾಟಿಹೋಗುತ್ತಾರೆ. ಈ ಬಗೆಯ ನಿರ್ಲಕ್ಷ್ಯದ ಮನೋಭಾವ ಪ್ರಪಂಚದ ರೀತಿಯಾಗಿದೆ. ಮಾನವತೆಯ ಬಗ್ಗೆ ಕೂಗುಹಾಕುವ ಬುದ್ಧಿಜೀವಿಗಳಂತೂ ತಮ್ಮದೇ ಬೌದ್ಧಿಕ ಪ್ರಪಂಚದಲ್ಲಿ ಸುಖಿಯಾಗಿರುತ್ತಾರೆ. 'ಏನನ್ನಾದರೂ ಸಾಧಿಸಬಲ್ಲೆ' ಎಂದು ಮಾನವನ ಆತ್ಮವಿಶ್ವಾಸ ಉತ್ತುಂಗ ನೆಲೆಗೇರಿದ್ದ ದಿನವೊಂದಿತ್ತು. ಈಗ ಅದಕ್ಕೆ ಮೊದಲು 'ಹಣವೊಂದಿದ್ದರೆ...' ಎಂಬ ಮಾತನ್ನು ಸೇರಿಸಬೇಕು. ಕೋಟ್ಯಾಧೀಶನಿಂದ ಹಿಡಿದು, ಕಡುಬಡವನಿಗೂ ಈ ಸತ್ಯ ಮನವರಿಕೆಯಾಗಿದೆ. ಮಾನವನು ತಾನು ಏನೇನೂ ಅಲ್ಲ, ತನ್ನಿಂದೇನೂ ನಡೆಯದು, ಎಂದು ಪ್ರತಿಕ್ಷಣವೂ ಹೇಳಿಕೊಳ್ಳುವಂತಾಗಿದೆ.

ಮತಾಂಧತೆ, ದೌರ್ಜನ್ಯ, ರಾಜಕೀಯ ಧ್ರುವೀಕರಣದಲ್ಲಿ ನಡೆಯುವ ಅನಾಚಾರಗಳು ಮಾನವನ ಆತ್ಮಸ್ಥೈರ್ಯವನ್ನೇ ಕುಗ್ಗಿಸಿವೆ. ಕೈಗಾರಿಕೆ, ಕಂಪೆನಿಗಳು, ಮನರಂಜನೆ, ಜಾಹೀರಾತು, ಮಾಧ್ಯಮಗಳು ಸಾಮಾನ್ಯ ಮಾನವನನ್ನು 'ಗ್ರಾಹಕ'ನನ್ನಾಗಿಸಿದೆ; ಅವನ ಬೇಟೆಯೇ ಅವುಗಳ ಗುರಿಯಾಗಿದೆ. ಮಾನವನ ಶಕ್ತಿ ಸಾಮರ್ಥ್ಯಗಳನ್ನು ಗುರುತಿಸುವ ಬದಲು, ಅವನ ದೌರ್ಬಲ್ಯಗಳನ್ನು ಗುರುತಿಸುವುದೇ ಈ ಜಾಲಗಳ ಪ್ರಮುಖ ಅಸ್ತ್ರವಾಗಿದೆ. ಟಿ.ವಿ., ಕಂಪ್ಯೂಟರ್, ಮೊಬೈಲ್ ಮುಂತಾದವುಗಳ ನೆರವಿನಿಂದ ಸಂಪರ್ಕ ಹಾಗೂ ವಿಚಾರ ವಿನಿಮಯ ವಿಸ್ತರಿಸಿದಷ್ಟೂ ಮಾನವ ತನ್ನ ಸ್ವಂತಿಕೆ, ತನ್ನತನ, ಅಂತರಂಗದ ಬದುಕು ಇವನ್ನು ಕಳೆದುಕೊಳ್ಳುತ್ತಿದ್ದಾನೆ. ಇದರ ಪರಿಣಾಮ - ಸಮಾಜದಲ್ಲಿ ವ್ಯಕ್ತಿ-ವ್ಯಕ್ತಿಯ ನಡುವಿನ ಸಾಮರಸ್ಯ, ಸಂಪರ್ಕ ಕಡಿಮೆಯಾಗಿ, ಪ್ರತಿಯೊಬ್ಬನೂ ತನ್ನೊಳಗೆ ಯಂತ್ರಜಗತ್ತನ್ನು ಕಟ್ಟಿಕೊಳ್ಳುತ್ತಿದ್ದಾನೆ. ಇದು ಸಮಾಜದಲ್ಲಿ ಒಡಕು, ಸಂಘರ್ಷ, ಬಿಕ್ಕಟ್ಟುಗಳನ್ನು ತಂದೊಡ್ಡಿದೆ.

### ವಿಜ್ಞಾನ ಕಂಡ ಹೊಸ ಜಗತ್ತು

ಈ ಎಲ್ಲ ಸಮಸ್ಯೆಗಳ ಮೂಲವೆಲ್ಲಿ ಎಂಬುದನ್ನು ಹುಡುಕುತ್ತಾ ಹೋದಾಗ, ಪಾಶ್ಚಾತ್ಯ ದೇಶಗಳಲ್ಲಿ ನಡೆದ ವೈಜ್ಞಾನಿಕ ಪ್ರಗತಿಯತ್ತ ಗಮನ ಹರಿಸಬೇಕು. ಪೌರ್ವಾತ್ಯ ದೇಶಗಳಂತೆ ಅಲ್ಲಿ ಧಾರ್ಮಿಕ, ಆಧ್ಯಾತ್ಮಿಕ ಆದರ್ಶ ಒಟ್ಟು ಸಮಾಜದ ಬೆನ್ನೆಲುಬಾಗದೆ, ಹಲವು ಮಂದಿ ವೈಚಾರಿಕ ಹಾಗೂ ಪ್ರಶ್ನಿಸುವ ಮನೋಧರ್ಮದ ಜನರು

ಅನೇಕ ಹೊಸತುಗಳನ್ನು ಹುಟ್ಟುಹಾಕಿದರು. ಅನೇಕ ವೈಚಾರಿಕ, ಸಾಮಾಜಿಕ ಕ್ರಾಂತಿಗಳು ಸಮಾಜವನ್ನು ವಿಭಿನ್ನ ಗತಿಯಲ್ಲಿ ಮುನ್ನಡೆಸಿದವು. ಇದರಿಂದಾಗಿ ವಿಜ್ಞಾನ, ತಂತ್ರಜ್ಞಾನಗಳು ಅಲ್ಲಿ ಕ್ಷಿಪ್ರಗತಿಯಲ್ಲಿ ಅಭಿವೃದ್ಧಿ ಹೊಂದಿದವು. ಧಾರ್ಮಿಕ ನೇತಾರರಲ್ಲೂ, ಸಂಸ್ಥೆಗಳಲ್ಲೂ ಹಬ್ಬಿದ ಬೂಟಾಟಿಕೆ, ಅನಾಚಾರಗಳು ವಿಚಾರವಾದಿಗಳ ಟೀಕೆಗಳಿಗೆ ಗುರಿಯಾದವು. ವೈಜ್ಞಾನಿಕ ವಿಚಾರಗಳೂ ಧರ್ಮ-ನಂಬಿಕೆಗಳಿಗೆ ವಿರುದ್ಧ ಸಾಗಿದ್ದರಿಂದ ಜನರು ಸಹಜವಾಗಿ ಧರ್ಮ-ಅಧ್ಯಾತ್ಮದಲ್ಲಿ ನಂಬಿಕೆ ಕಳೆದುಕೊಂಡರು.

ಆದರೆ ಪರಿವರ್ತನೆ, ಬೆಳವಣಿಗೆ ಇಲ್ಲಿಗೇ ನಿಲ್ಲಲಿಲ್ಲ; ತಂತ್ರಜ್ಞಾನ ವ್ಯಾಪಾರ-ವಹಿವಾಟುಗಳು, ವೈಜ್ಞಾನಿಕ ಪ್ರಗತಿ ಅನೇಕ ದೇಶಗಳ ನಡುವೆ ಸ್ಪರ್ಧೆ, ಪೈಪೋಟಿ, ದ್ವೇಷಗಳಾಗಿ ಬದಲಾಯಿಸಿದವು; ಅವುಗಳ ನಡುವೆ ಸಹಬಾಳ್ವೆ, ಸಹಯೋಗದ ಸಂದೇಶವನ್ನು ಕಲಿಸುವ ಯಾವ ಶಕ್ತಿಗಳೂ ಅಷ್ಟೊಂದು ಪ್ರಭಾವಶಾಲಿಯಾಗಲಿಲ್ಲ. ಅನೇಕ ಹೊಸತನ, ಹೊಸ ಆವಿಷ್ಕಾರಗಳೊಂದಿಗೆ ಇಡೀ ಜಗತ್ತನ್ನೇ ನುಂಗಿ ನೊಣೆಯುವ ಎರಡು ಮಹಾಯುದ್ಧಗಳನ್ನು ಜಗತ್ತು ಕಂಡಿತು. ಮಾನವನಲ್ಲಿ ಹಿಂದೆಂದೂ ಕಂಡುಬರದ ಹತಾಶೆ ಎಲ್ಲೆಡೆ ತಾಂಡವವಾಡಿತು. ಬಹುಶಃ ಮಹಾಭಾರತದ ಯುದ್ಧಾನಂತರ ಕಂಡುಬರುವ 'ಸ್ಮಶಾನ ಮೌನ'ದ ವ್ಯಂಗ್ಯ ಮತ್ತೆ ಮರುಕಳಿಸಿತು. ಮಹಾಭಾರತ ಕಥೆಯ ಉದ್ದಕ್ಕೂ ವ್ಯಾಪಿಸುವ ಮನುಕುಲದ ಮಹಾದುರಂತದ ಹಿಂದೆ ಶ್ರೀಕೃಷ್ಣನ ಗೀತೆಯ ಮಧುರ ಧ್ವನಿಯಿದೆ. ಎಂಥ ಹತಾಶೆ, ಅಧೈರ್ಯ, ಶೂನ್ಯತೆಗಳ ಭಾವವನ್ನೂ ಹಿಂದಿಕ್ಕಿ ನೂತನ ಶಕ್ತಿಸಂಚಾರ ಮಾಡುವ ದಿವ್ಯ, ಅಲೌಕಿಕ, ಅಮರಧ್ವನಿಯದು. ಆದರೆ ಆಧುನಿಕ ಜಗತ್ತಿನ ಹತಾಶೆಯ, ಬರಡುಜೀವನದ ನಡುವೆ ಆ ಧ್ವನಿಯೆಲ್ಲಿ?

ಮಾನವ ಕಂಡ ಅನಾಹುತಗಳಿಗೆ ಲೆಕ್ಕವಿಲ್ಲ. ಸಾಮಾಜಿಕ ಏರುಪೇರುಗಳು, ಕ್ರಾಂತಿಯ ಹೆಸರಿನಲ್ಲಾದ ಕಗ್ಗೊಲೆಗಳು, ಫುಕೊಶಿಮಾ-ಚರ್ನೋಬಿಲ್-ಭೋಪಾಲ್ ದುರಂತಗಳು, ಉಗ್ರವಾದಿಗಳ ನಿರ್ದಯ ಕೃತ್ಯಗಳು, ಜನಾಂಗಗಳ ನಡುವೆ ಹೊತ್ತಿ ಉರಿದ ದ್ವೇಷದ ಬೆಂಕಿ - ಹೀಗೆ ಆಧುನಿಕ ಜಗತ್ತು ಹಲವು ಸಂದರ್ಭಗಳಲ್ಲಿ ಭಯದಿಂದ ತತ್ತರಿಸಿದೆ. ವಿವೇಕಶೂನ್ಯ ಮನಸ್ಸು, ಹೃದಯಶೂನ್ಯ ಬೌದ್ಧಿಕತೆ ಎಂಥ ಭೀಕರ ಕೃತ್ಯಗಳನ್ನು ಎಸಗಬಲ್ಲದು ಎಂಬುದಕ್ಕೆ ನಿದರ್ಶನಗಳಾಗಿವೆ, ಈ ಘಟನೆಗಳು. ನಮ್ಮ ಮಕ್ಕಳಿಗೆ ಬಾಲ್ಯದಿಂದಲೇ ಕಟ್ಟುನಿಟ್ಟಾದ ನೈತಿಕ, ಆಧ್ಯಾತ್ಮಿಕ ಆದರ್ಶಗಳನ್ನು ಬೋಧಿಸುತ್ತ, ಅದರ ಜೊತೆಜೊತೆಗೇ ಆಧುನಿಕ ವಿದ್ಯಾಭ್ಯಾಸವನ್ನೂ ಕಲಿಸುವ ಕಾರ್ಯ ಯಾಕೆ ನಡೆಯಲಿಲ್ಲ? ನಮ್ಮ ತಲೆಮಾರು, ವಿಜ್ಞಾನ ತಂದಿಟ್ಟ ಸುಖ ವೈಭೋಗಗಳಲ್ಲಿ ಮೈಮರೆತಿದೆ; ಅದರ ದುಷ್ಪರಿಣಾಮಗಳನ್ನು ಚೆನ್ನಾಗಿ ಉಂಡರೂ ಪಾಠ ಕಲಿತಿಲ್ಲ. ನಮ್ಮ ಮುಂದಿನ ಜನಾಂಗವಾದರೂ ಎಚ್ಚೆತ್ತುಕೊಳ್ಳಲಿ ಎಂಬ ಜವಾಬ್ದಾರಿಯೂ ಅದಕ್ಕಿಲ್ಲ. ಶಿಕ್ಷಣದ ವಿಷಯವಾಗಿ ತೋರಿಸುವ ಈ ನಿರ್ಲಕ್ಷ್ಯ, ಅಸಡ್ಡೆ ಇಡೀ ಮಾನವಕುಲಕ್ಕೇ ಮಾಡುವ ದ್ರೋಹವಲ್ಲವೆ? ಜನಾಂಗವನ್ನು ಉಳಿಸುವ, ಬೆಳೆಸುವ ಚೈತನ್ಯವನ್ನು ಮಕ್ಕಳಲ್ಲಿ ತುಂಬುವಂತಹ ಶಿಕ್ಷಣವನ್ನು ಇಂದು ರೂಪಿಸಬೇಕಾಗಿದೆ. ಈ ತಲೆಮಾರಿನ ಕೊಳೆ, ರೋಗಗಳು ಹೊಸ ಪೀಳಿಗೆಯ ಸ್ವಚ್ಛ ಶುಭ್ರ ಮನಸ್ಸುಗಳನ್ನೇ ಪ್ರವೇಶಿಸದಂತೆ ಹೊಸತರಬೇತಿಯಕ್ರಮವನ್ನು ನಾವು ಕಂಡುಕೊಳ್ಳಬೇಕಾಗಿದೆ.

### ಪೌರ್ವಾತ್ಯರ ಪರದಾಟ

ಪಾಶ್ಚಾತ್ಯ ದೇಶಗಳಿಗೆ ಹೋಲಿಸಿದಾಗ, ಪೌರ್ವಾತ್ಯ ದೇಶಗಳಲ್ಲಿ ಉಂಟಾದ ಬದಲಾವಣೆಗಳು ಅಷ್ಟೊಂದು ಕ್ಷಿಪ್ರವೆನಿಸದಿದ್ದರೂ, ಇಲ್ಲಿನ ಜೀವನಶೈಲಿ, ಸಾಮಾಜಿಕ ವ್ಯವಸ್ಥೆ ಹಲವು ರೀತಿಯ ಬದಲಾವಣೆಗಳಿಗೆ ಒಳಗಾಗುತ್ತಿದೆ. ಹಿಂದಿನ ಶತಮಾನಗಳಲ್ಲಿ ನಡೆಯದಿದ್ದ ಪರಿವರ್ತನೆಗಳು ಇತ್ತೀಚೆಗೆ ಇಲ್ಲಿ ಉಂಟಾಗುತ್ತಿವೆ. ತಂತ್ರಜ್ಞಾನ, ಮಾಧ್ಯಮಗಳ ಬೆಳವಣಿಗೆಗಳ ಪಾತ್ರ ಇದರಲ್ಲಿ ಮುಖ್ಯ. ಇಲ್ಲಿ ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಮೌಲ್ಯಗಳು ಪಾಶ್ಚಾತ್ಯ ದೇಶಗಳಿಗಿಂತ ಹೆಚ್ಚು ಪ್ರಭಾವಶಾಲಿಯಾಗಿರುವುದನ್ನು ಅಲ್ಲಗಳೆಯುವಂತಿಲ್ಲ. ಒಂದೆಡೆ ಶರವೇಗದಿಂದ ಧಾವಿಸುತ್ತಿರುವ ಆಧುನಿಕತೆ, ಇನ್ನೊಂದೆಡೆ ಬದಲಾಗುತ್ತಿರುವ ಸಮಾಜ ಎದುರಿಸುತ್ತಿರುವ ಬಿಕ್ಕಟ್ಟಿನ ಸವಾಲುಗಳು, ಇವುಗಳೊಂದಿಗೆ ಮತೀಯ ಶಕ್ತಿಗಳು ವೈಜ್ಞಾನಿಕ ತಂತ್ರಜ್ಞಾನದ ದುರ್ಬಳಕೆ ಮಾಡಿಕೊಂಡು ನಡೆಸುವ ಅನಾಹುತಗಳು ಒಂದು ರೀತಿಯಲ್ಲಿ ಭೀತಿಯ ವಾತಾವರಣವನ್ನು ಸೃಷ್ಟಿಸಿವೆ. ಸಾಮಾಜಿಕ ಸಂದರ್ಭವೂ ಕಲುಷಿತಗೊಂಡಿರುವ ಸತ್ಯ ಹಲವು ವೇಳೆ ಬೆಚ್ಚಿಬೀಳಿಸುತ್ತದೆ. ನಮ್ಮ ಮಕ್ಕಳು, ಮನೆಮಂದಿ, ಮನೆ ಬಿಟ್ಟು ಹೊರಟರೆ ಸುರಕ್ಷಿತವಾಗಿ ಮರಳಿ ಬರುವರೇ - ಎಂದು ಸಂದೇಹಪಡಬೇಕಾದ ಸನ್ನಿವೇಶ ನಿರ್ಮಾಣವಾದರೆ ಜೀವನ ಎಷ್ಟೊಂದು ಅಭದ್ರಗೊಳ್ಳುವುದು? ಇದರೊಂದಿಗೆ ಮಾದಕ ದ್ರವ್ಯಗಳ ಜಾಲ, ಕುಟುಂಬಗಳ ಸಂಬಂಧಗಳನ್ನು ಮುರಿಯುವಲ್ಲಿ ಮಾಧ್ಯಮಗಳ ಪಾತ್ರ - ಇತ್ಯಾದಿ ವಿಷಯಗಳ ಬಗ್ಗೆ ಅನೇಕ ವರದಿಗಳು ಬರುತ್ತಿವೆ. ಇವುಗಳ ನಡುವೆ ಮಾನವನ ಜೀವನ ಸರಳ, ಸಹಜ ಹಾಗೂ ಸುಂದರ ಎನ್ನುವುದು ಕೇವಲ ಭ್ರಮೆ ಮಾತ್ರ ಎನ್ನಬೇಕು.

ಇಂಥ ಗೊಂದಲದ ನಡುವೆಯೂ ಅಲ್ಲಲ್ಲಿ ಮೂಡಿಬರುವ ಕೆಲವು ಬೆಳಕಿನ ಕಿಡಿಗಳನ್ನು ನಾವು ವಿಶೇಷವಾಗಿ ಗಮನಿಸಬೇಕು. ಮಾನವೀಯತೆಯ ಕಥೆಯನ್ನು ಸಾರುವ ಅನೇಕ ಘಟನೆಗಳು ಅಲ್ಲಲ್ಲಿ, ಆಗಾಗ ನಡೆಯುತ್ತಿರುತ್ತವೆ. ಹಿಂದೆ ಗಮನಿಸದೆ ಹೋಗುತ್ತಿದ್ದ ಸಂಗತಿಗಳು ಇಂದು ಸುದ್ದಿಯಾಗುತ್ತಿವೆ, ಸುದ್ದಿಜಾಲಗಳಲ್ಲಿ ಹರಿದಾಡುತ್ತಿವೆ. 'ಥೂ! ಹಾಳು ಜಗತ್ತು!' ಎಂದು ಮುಖ ಸಿಂಡರಿಸಿಕೊಳ್ಳುವವರೂ, 'ಆಹ! ಅದ್ಭುತ - ಏನು ಆಶ್ಚರ್ಯಕರ ವಿಷಯ!' ಎಂದು ಹುಬ್ಬೇರಿಸುವಂತಾಗುತ್ತದೆ. ಜಗತ್ತಿನಲ್ಲಿ ಇನ್ನೂ ಮೌಲ್ಯ, ಆದರ್ಶ, ನಂಬಿಕೆ ಬತ್ತಿಹೋಗಿಲ್ಲ ಎಂದು ಜನ ನೆಮ್ಮದಿಯ ಉಸಿರು ಬಿಡುತ್ತಾರೆ. ಕೆಲವು ಮಾಧ್ಯಮಗಳು ಮಾತ್ರ ಇಂಥ ಆಶಾದಾಯಕ ಸುದ್ದಿಗಳನ್ನು ಪ್ರಕಟಿಸದೆ, ಕೇವಲ ಬಿಕ್ಕಟ್ಟು, ಹತಾಶೆ, ಕ್ರೌರ್ಯಗಳನ್ನಷ್ಟೇ ವೈಭವೀಕರಿಸುವುದು ಅತ್ಯಂತ ದುರದೃಷ್ಟಕರ ಸಂಗತಿ. ಅಂತಹ ಮಾಧ್ಯಮಗಳನ್ನು ಜನಸಾಮಾನ್ಯರೇ ತಿರಸ್ಕರಿಸಬೇಕು.

### ಜೀವನದ ಮೂಲಭೂತ ಸಂಗತಿಗಳು

ಮಾನವನ ಮಹತ್ವವನ್ನು, ಅವನ ಅಸಾಧಾರಣ ಶಕ್ತಿ ಸಾಮರ್ಥ್ಯವನ್ನು ಹೊಸಕಿ ಹಾಕುವ ಆಧುನಿಕ ಆವಿಷ್ಕಾರಗಳು ಇನ್ನೊಂದು

ಅನಾಹುತವನ್ನು ಮಾಡುತ್ತವೆ. ಅದೇ, ಅವನ ಮೂಲಭೂತ ಜೀವನದೃಷ್ಟಿ ಮರೆತುಹೋಗುವಂತೆ ಮಾಡುವುದು. ಉದಾಹರಣೆಗೆ, ಆಹಾರವನ್ನೇ ತೆಗೆದುಕೊಳ್ಳೋಣ. ಆಹಾರಕ್ಕೆ ಮೂಲವಾದ ಧಾನ್ಯ, ಬೇಳೆಕಾಳು, ಸಸ್ಯ-ತರಕಾರಿ, ಹಣ್ಣುಗಳು ಹಾಗೂ ಇವುಗಳನ್ನು ಸೃಷ್ಟಿಮಾಡುವ ಕೃಷಿ ಹಾಗೂ ಅದಕ್ಕೆ ಸಂಬಂಧಿಸಿದ ಕೆಲಸಗಳಷ್ಟೇ ನಮ್ಮಲ್ಲಿ ಪ್ರಧಾನವಾಗಿ ಉಳಿದಿಲ್ಲ. ಈ ಮೂಲಭೂತ ಕಾರ್ಯವನ್ನು ಹಲವು ಇತರ ಹಿತಾಸಕ್ತಿಗಳು, ಶಕ್ತಿಗಳು ನಿಯಂತ್ರಿಸುತ್ತಿವೆ. ಪ್ರಧಾನವಾಗಿ ಕೃಷಿ ಉತ್ಪನ್ನಗಳ ವ್ಯಾಪಾರ, ಮಧ್ಯವರ್ತಿ ವ್ಯಾಪಾರಿಗಳ ಪೈಪೋಟಿ, ಅನೇಕ ಕೃಷಿ ಆಧಾರಿತ ಕೈಗಾರಿಕೆಗಳು, ಆಧುನಿಕ ಬೇಕರಿ – ಕಂಪನಿ ಆಹಾರ ಉದ್ದಿಮೆಗಳು, ಆಮದು-ರಫ್ತು ವ್ಯವಹಾರಗಳು, ಕೃತಕವಾಗಿ ಸೃಷ್ಟಿಸುವ ಕೊರತೆಗಳು, ವಿತರಣಾ ವ್ಯವಸ್ಥೆಯಲ್ಲಿನ ಏರು ಪೇರುಗಳು – ಇವೆಲ್ಲ ಬದುಕಿನ ಮೂಲಭೂತ ಅಗತ್ಯಗಳನ್ನು ಸರಳವಾಗಿ ಪೂರೈಸಲು ಬಿಡುವುದಿಲ್ಲ. ಇದೇ ರೀತಿ ಗ್ರಾಮೀಣ ಜೀವನ, ನಗರಜೀವನ, ಸಂಪರ್ಕವ್ಯವಸ್ಥೆ, ವಿದ್ಯಾಭ್ಯಾಸ ಸಂಸ್ಕೃತಿ ಇವೆಲ್ಲ ಸಹಜವಾಗಿ, ಸುಗಮವಾಗಿ ಮುಂದುವರೆಯುವಂತೆ ಮಾಡಲು ಯಾವುದೇ ಸುರಕ್ಷಿತ ವ್ಯವಸ್ಥೆ ನಮ್ಮಲ್ಲಿಲ್ಲ. ಕೇವಲ ವೈದ್ಯಕೀಯ ಕ್ಷೇತ್ರವನ್ನು ತೆಗೆದುಕೊಂಡರೂ, ಒಬ್ಬ ಸಾಮಾನ್ಯ ಮಾನವ ರೋಗಗ್ರಸ್ತನಾದಾಗ ಅನುಭವಿಸುವ ತಳಮಳಗಳನ್ನು ಗಮನಿಸಬೇಕು: ಮಾನವ ತನ್ನ ಎಲ್ಲ ಆತ್ಮವಿಶ್ವಾಸವನ್ನೂ ಕಳೆದು ಕೊಳ್ಳುತ್ತಾನೆ, ವೈದ್ಯಕೀಯ ಸೇವೆ ಎನ್ನುವುದು ನಿಜವಾದ 'ಸೇವೆ' ಯಾಗಿ ಉಳಿದಿದೆಯೋ ಅಥವಾ ರೋಗಿಯ ಚೈತನ್ಯವನ್ನೆಲ್ಲ ಹೀರುವ ಒಂದು ವ್ಯವಸ್ಥಿತ ಜಾಲವಾಗಿದೆಯೋ ಎಂದು ಪ್ರಶ್ನಿಸಬೇಕಾಗಿದೆ.

ಈ ಹಿನ್ನೆಲೆಯಲ್ಲಿ ಮಾನವನ ಬದುಕಿಗೆ ಅಗತ್ಯವಾದ ಕೆಲವು ಸಂಗತಿಗಳನ್ನು ಹೀಗೆ ಗುರುತಿಸಬಹುದು: ೧) ಮೂಲಭೂತ ವಸ್ತುಗಳ (ಕೃಷಿ, ವ್ಯಾಪಾರ, ಉದ್ದಿಮೆ, ಆರ್ಥಿಕತೆ) ನಿರ್ಮಾಣ, ವಿತರಣೆಗಳನ್ನು ಯಾವುದೇ ಅಡಚಣೆಯಿಲ್ಲದೆ ನಿರ್ವಹಿಸುವ ವ್ಯವಸ್ಥೆ. ೨) ಸಮಾಜದ ಬದಲಾವಣೆಗಳಲ್ಲಿ ನಮ್ಮ ನೈತಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಮೌಲ್ಯ-ಆದರ್ಶಗಳನ್ನು ಮರೆಯದೆ, ನಮ್ಮನ್ನು ನಾವು ಕಳೆದುಕೊಳ್ಳದೆ ಇರುವಂತಾಗಲು ಯೋಗ್ಯವಾದ ಶಿಕ್ಷಣ-ತರಬೇತಿ. ೩) ವೈಜ್ಞಾನಿಕ, ತಾಂತ್ರಿಕ ಬೆಳವಣಿಗೆಯ ಭರದಲ್ಲಿ ಮಾನವನ ಶ್ರೇಷ್ಠತೆಯನ್ನು ಎತ್ತಿಹಿಡಿಯುವ, ಶಾಂತಿ, ಸಹಬಾಳ್ವೆಯನ್ನು ಪ್ರಾಯೋಗಿಕವಾಗಿ ಬದುಕಿನಲ್ಲಿ ತರುವ ಮನಃಸ್ಥಿತಿ. ಇವು ನಮ್ಮ ಆಧುನಿಕ ಜನಜೀವನದಲ್ಲಿ ಮೂಡುವಂತಾಗಬೇಕು.

### ಆಧ್ಯಾತ್ಮಿಕತೆಯೇ ಬೆನ್ನೆಲುಬು

'ಮಾನವನ ಗುರಿ ಭಗವಂತನ ಸಾಕ್ಷಾತ್ಕಾರ' ಎಂದು ಶ್ರೀರಾಮಕೃಷ್ಣರು ಸಾರಿದರು. ಸ್ವಾಮಿ ವಿವೇಕಾನಂದರು, ''ಪ್ರತಿಯೊಂದು ಆತ್ಮವೂ ಕೂಡ ಸ್ವಭಾವತಃ ಪವಿತ್ರವಾದುದು. ಅಂತರಾಳದಲ್ಲಿರುವ ಈ ಪವಿತ್ರತೆಯನ್ನು ಬಾಹ್ಯ ಮತ್ತು ಆಂತರಿಕ ಪ್ರಕೃತಿಗಳ ನಿಗ್ರಹದಿಂದ ವ್ಯಕ್ತ ಮಾಡುವುದೇ ಜೀವನದ ಗುರಿ. ಇದನ್ನು ಕರ್ಮ-ಭಕ್ತಿ-ಜ್ಞಾನ-ಯೋಗ ಇವುಗಳಲ್ಲಿ ಯಾವುದಾದರೂ ಒಂದರ ಮೂಲಕವಾಗಲೀ, ಅಥವಾ ಎಲ್ಲಾ ಮಾರ್ಗಗಳ ಮೂಲಕವಾಗಲೀ ಸಾಧಿಸಿ ಮುಕ್ತರಾಗಿ'' ಎಂದರು. *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂಪುಟ ೨, ಪು.೪೩೦-೩೧)* ಇನ್ನೊಂದೆಡೆ ಸ್ವಾಮೀಜಿ, ''ನೀವು ಅಧ್ಯಾತ್ಮವನ್ನು ತ್ಯಜಿಸಿ, ಪಾಶ್ಚಾತ್ಯ ಭೌತಿಕ ನಾಗರಿಕತೆಯ ಆಕರ್ಷಣೆಗೆ ಒಳಗಾದರೆ, ಮೂರು ತಲೆಮಾರಿನ ಹೊತ್ತಿಗೆ ನಿಮ್ಮ ಜನಾಂಗ ನಾಶವಾಗುವುದು. ಏಕೆಂದರೆ ಇದರಿಂದ ರಾಷ್ಟ್ರದ ಬೆನ್ನೆಲುಬು ಮುರಿಯುತ್ತದೆ. ಯಾವ ತಳಹದಿಯ ಮೇಲೆ ರಾಷ್ಟ್ರಸೌಧವು ನಿರ್ಮಿತವಾಗಿರುವುದೊ, ಅದು ಕುಸಿದು ಬೀಳುತ್ತದೆ. ಇದರ ಪರಿಣಾಮವೇ ಸರ್ವನಾಶ.'' ಎಂದಿದ್ದಾರೆ. *(ಕೃತಿಶ್ರೇಣಿ, ೩.೪೨)*

ಹಲವು ಮಂದಿ ಮಹಾತ್ಮರುಗಳು ಇದೇ ಸತ್ಯವನ್ನು ವಿವಿಧ ಮಾತುಗಳಲ್ಲಿ ಸಾರಿದ್ದಾರೆ; ಆದರೆ ಅದರ ಮಹತ್ವವನ್ನರಿತವರು ಎಷ್ಟು ಮಂದಿ? ತನ್ನ ಜನ್ಮದ, ಜೀವನದ ಮಹತ್ವವನ್ನು ಅರಿತವನು ದುಷ್ಟ ಚಿಂತನೆ ಕ್ರೌರ್ಯಗಳಿಂದ ಕೆಡುಕಿನ ಮಾರ್ಗ ತುಳಿಯಲು ಸಾಧ್ಯವೆ? ಮಾನವೀಯತೆಯಲ್ಲಿ ಮುಳುಗಿರುವ ಮನಸ್ಸು ದ್ವೇಷ, ಸ್ವಾರ್ಥ, ಅಸಹನೆಗಳಿಂದ ಇತರರ ನಾಶಕ್ಕಾಗಿ ಯತ್ನಿಸಲು ಸಾಧ್ಯವೆ? ಮಾನವನ ಉನ್ನತಿ ಅವನ ಬಾಳಿನ ಆನಂದ, ಶಾಂತಿ, ನೆಮ್ಮದಿಗಳಲ್ಲಿದೆ; ಜೀವಿ-ಜೀವಿಗಳ ನಡುವಿನ ಪ್ರೀತಿ, ಬಾಂಧವ್ಯಗಳಲ್ಲಿದೆ. ಪರಸ್ಪರ ಸಹಕಾರ, ಸಂತಸ, ಭಾವ ವಿನಿಮಯಗಳಿಂದ ಸಮಾಜ ಆನಂದವನ್ನು ಕಾಣಬೇಕು. ಆದರೆ ಕೇವಲ ಇಂದ್ರಿಯಗಳ ಸುಖವನ್ನು ವೃದ್ಧಿಸುವ ಕೃತಕ ಸಾಮಗ್ರಿಗಳನ್ನು ಸೃಷ್ಟಿಸುತ್ತಾ ಹೋಗುವ ಜನಾಂಗ ಆಂತರಿಕ ಸುಖ, ಶಾಂತಿಗಳನ್ನು ಹೇಗೆ ಪಡೆಯಲು ಸಾಧ್ಯ? ಎಲ್ಲರ ನೆಮ್ಮದಿಗಾಗಿ ಒಬ್ಬೊಬ್ಬ ವ್ಯಕ್ತಿಯೂ ಚಿಂತಿಸಬೇಕು; ಆಗ ಇಡೀ ಸಮಾಜ, ದೇಶ ಪ್ರತಿಯೊಂದೂ ಒಟ್ಟು ಮನುಕುಲದ ಒಳಿತಿಗಾಗಿ ಮಿಡಿಯುತ್ತದೆ. ಪ್ರತಿಯೊಂದು ದೇಶದ ನೆಮ್ಮದಿಯಿರುವುದು ಇತರ ದೇಶಗಳೊಂದಿಗೆ ಅದು ಹೊಂದಿರುವ ಸುಮಧುರ ಬಾಂಧವ್ಯದಿಂದ ಎಂಬುದನ್ನು ಜಗತ್ತು ಇಂದು ಮನಗಾಣುತ್ತಿದೆ. ಮಾನವನ ವಿಶಿಷ್ಟ ದೇಹರಚನೆ, ಅದ್ಭುತ ಮಾನಸಿಕ ಶಕ್ತಿ, ಬೌದ್ಧಿಕ ಸಾಮರ್ಥ್ಯಗಳು ಕೇವಲ ಸುಖಲೋಲುಪತೆ, ಇಂದ್ರಿಯಸುಖಗಳಿಗಲ್ಲ; ಅವುಗಳಿಂದ ಮನುಷ್ಯನು ತನ್ನ ಅಂತರಂಗದಲ್ಲಿರುವ ಆತ್ಮವಸ್ತುವನ್ನು ಅರಿತಾಗಲೇ ಅವನು ಪರಿಪೂರ್ಣತೆಯನ್ನು ಹೊಂದುವನು ಎಂಬುದು ಭಾರತೀಯ ದೃಷ್ಟಿಕೋನ. ಈ ಸತ್ಯವನ್ನು ಆಧರಿಸಿ ಮನುಕುಲ ಮುನ್ನಡೆಯಬೇಕಾಗಿದೆ.

ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಮುಖ್ಯ. ಸಾವಿರಕ್ಕೊಬ್ಬ, ಲಕ್ಷಕ್ಕೊಬ್ಬ ಧಾರ್ಮಿಕನಾದರೆ ಅದರಿಂದ ಇಡೀ ಸಮಾಜ ಧಾರ್ಮಿಕವಾಗದು. ಆದರೆ ಅಂಥ ಒಬ್ಬ ಮಹಾವ್ಯಕ್ತಿಯ ಪ್ರಭಾವ ಇಡೀ ಸಮಾಜದ ಮೇಲಾಗುವುದು; ಅದರಿಂದ ಸಮಾಜವೇ ಉನ್ನತಿಗೇರುವುದು. ಭಾರತದಲ್ಲಿ ಮಹಾವ್ಯಕ್ತಿಗಳಿಗೇನೂ ಕೊರತೆಯಿಲ್ಲ. ಅನಾದಿ ಕಾಲದಿಂದ ಹುಟ್ಟಿಬಂದ ನೂರಾರು ಸಂತರು, ಮಹಾತ್ಮರು, ಅವತಾರ ಪುರುಷರು ನಮಗೆ ತೋರಿಸಿಕೊಟ್ಟ ಮಾರ್ಗವನ್ನು ನಾವು ಎತ್ತಿಹಿಡಿಯಬೇಕು. 'ಆಧುನಿಕತೆ'ಯ ಫ್ಯಾಷನ್ ಎಷ್ಟೇ ವಿಜೃಂಭಿಸಲಿ, ಅವುಗಳ ತಾತ್ಕಾಲಿಕ ಭ್ರಾಂತಿಯನ್ನು ಮೆಟ್ಟಿ ನಿಲ್ಲುವ ನಮ್ಮ ಆಂತರಿಕ ಶಕ್ತಿ ಮತ್ತೊಮ್ಮೆ ಬೆಳಗಬೇಕು. ಎಲ್ಲ ಧೈರ್ಯ, ಚೈತನ್ಯ, ಶಕ್ತಿಗಳ ಮೂಲ ಆಧ್ಯಾತ್ಮಿಕತೆಯಲ್ಲೇ ಎಂಬುದು ನಮಗೆ ಮನವರಿಕೆಯಾಗಬೇಕು.



# ಸರಳತೆ



* ಮಗುವಿನಂಥ ವಿಶ್ವಾಸ ಬೇಕು. ಮಗು ತಾಯನ್ನು ನೋಡಲು ಯಾವ ರೀತಿಯಾದ ವ್ಯಾಕುಲತೆಯನ್ನು ತೋರಿಸುವುದೊ, ಆ ರೀತಿಯಾದ ವ್ಯಾಕುಲತೆ ಬೇಕು. ಅಂಥಾ ವ್ಯಾಕುಲತೆ ಉಂಟಾಯಿತು ಎಂದರೆ ಅರುಣೋದಯವಾದ ಹಾಗೆಯೇ. ಅರುಣೋದಯವಾದ ನಂತರ ಸೂರ್ಯೋದಯ ವಾಗಲೇಬೇಕು. ಅಂಥ ವ್ಯಾಕುಲತೆಯುಂಟಾದ ಒಡನೆಯೇ ಭಗವಂತನ ದರ್ಶನ ದೊರೆಯುತ್ತದೆ.

* ಜಟಿಲ ಎಂಬ ಹೆಸರಿನ ಒಬ್ಬ ಬಾಲಕನ ಕಥೆ ಇದೆ, ಕೇಳು. ಆ ಬಾಲಕ ಒಂದು ಕಾಡಿನ ಮೂಲಕ ಹಾದು ತನ್ನ ಶಾಲೆಗೆ ಹೋಗಬೇಕಾಗಿತ್ತು. ಕಾಡುದಾರಿ ಆತನಿಗೆ ಬಹಳ ಹೆದರಿಕೆಯನ್ನುಂಟುಮಾಡುತ್ತಿತ್ತು. ಆ ಹುಡುಗ ತನ್ನ ಭಯ ವನ್ನು ಒಂದು ದಿನ ತನ್ನ ತಾಯಿಗೆ ತಿಳಿಸಿದ. ಆಕೆ ಹೇಳಿದಳು: 'ನೀನೇಕೆ ಭಯಪಡಬೇಕು? ಮಧುಸೂದನನನ್ನು ಕರೆ.' ಆ ಬಾಲಕ ಆಕೆಯನ್ನು ಕೇಳಿದ: 'ಅಮ್ಮಾ, ಮಧುಸೂದನ ಯಾರು?' ತಾಯಿ ಹೇಳಿದಳು: 'ಆತ ನಿನ್ನ ಅಣ್ಣ.' ಈ ಮಾತುಕತೆಯಾದ ಬಳಿಕ ಒಂದು ದಿನ ಕಾಡಿನಲ್ಲಿ ಹೋಗುತ್ತಿದ್ದಾಗ ಆ ಬಾಲಕನಿಗೆ ಮತ್ತೆ ಹೆದರಿಕೆಯಾಯಿತು. ಆಗ ಆ ಬಾಲಕ ಕೂಗಲಾರಂಭಿಸಿದ: 'ಅಣ್ಣಾ, ಮಧುಸೂದನಾ!' ಎಲ್ಲಿ , ಮಧುಸೂದನನೂ ಇಲ್ಲ, ಅಣ್ಣನೂ ಇಲ್ಲ. ಆಗ ಆ ಬಾಲಕ ಅಳುತ್ತಾ ತಾರಸ್ವರದಿಂದ ಕೂಗ ಲಾರಂಭಿಸಿದ: 'ಎಲ್ಲಿದ್ದೀಯೊ ಅಣ್ಣಾ , ಮಧುಸೂದನಾ? ಬೇಗ ಬಾರೊ. ನನಗೆ ಬಹಳವಾಗಿ ಹೆದರಿಕೆಯಾಗುತ್ತದೆ ಕಣೋ!' ಭಗವಂತನಿಗೆ ಆಗ ಸುಮ್ಮನಿರಲಾಗಲಿಲ್ಲ. ಆತ ಆ ಬಾಲಕನಿಗೆ ಹೇಳಿದ: 'ನೋಡೋ, ನಾನಿಲ್ಲೇ ಇದ್ದೇನೆ. ನೀನೇಕೆ ಭಯಪಟ್ಟು ಕೊಳ್ಳಬೇಕೋ.' ಹೀಗೆಂದು ಹೇಳಿ ಆ ಬಾಲಕನನ್ನು ಕಾಡಿನ ಕೊನೆಯವರೆಗೂ ಕರೆದುಕೊಂಡು ಹೋಗಿ ಶಾಲೆಗೆ ದಾರಿ ತೋರಿ ಸಿದ. ಆತನಿಂದ ಬೀಳ್ಕೊಂಡಾಗ ಭಗವಂತ ಆ ಬಾಲಕನಿಗೆ ಹೇಳಿದ: 'ನೀನು ಕರೆದಾಗಲೆಲ್ಲಾ ನಾನು ಬಂದುಬಿಡುತ್ತೇನೆ. ಹೆದರಿಕೊಳ್ಳ ಬೇಡ.' ಬಾಲಕನ ಇಂಥ ವಿಶ್ವಾಸ, ವ್ಯಾಕುಲತೆ ಬೇಕು.

* ಭಗವಂತನ ಸಾಕ್ಷಾತ್ಕಾರ ದೊರೆಯಿತು ಎಂದರೆ ಮಗುವಿನ ಸ್ವಭಾವ ಬಂದು ಬಿಡುತ್ತದೆ. ಯಾರು ಯಾರ ಚಿಂತನೆಯನ್ನು ಮಾಡು ತ್ತಾರೋ ಅವರಿಗೆ ಅವರ ಸತ್ತ್ವ ಬಂದುಬಿಡುತ್ತದೆ. ಭಗವಂತನ ಸ್ವಭಾವ ಮಗುವಿನ ಹಾಗೆ. ಮಗು ಆಟದ ಮನೆ ಕಟ್ಟಿ, ಮತ್ತೆ ಅದನ್ನು ತುಳಿದು ಹಾಕುವಂತೆ ಭಗವಂತನೂ ಸೃಷ್ಟಿ ಸ್ಥಿತಿ ಪ್ರಳಯಗಳ ಸಂಬಂಧ ವಾಗಿ ಹಾಗೆಯೇ ವರ್ತಿಸುತ್ತಾನೆ. ಮಗು ಯಾವ ರೀತಿಯಾಗಿ ಯಾವ ಗುಣಕ್ಕೂ ಕಟ್ಟುಬಿದ್ದಿಲ್ಲವೋ ಅದೇ ರೀತಿಯಾಗಿ ಭಗವಂತ ಸತ್ತ್ವ ರಜಸ್ತಮೋಗುಣಗಳಿಗೆ ಅತೀತನಾಗಿದ್ದಾನೆ. ಅದಕ್ಕಾಗಿಯೇ ಮಕ್ಕಳ ಸ್ವಭಾವ ತಮಗೆ ಬರಲೆಂದು ಪರಮಹಂಸರಾದವರು ತಮ್ಮೊ ಡನೆ ಹತ್ತು ಹದಿನೈದು ಮಕ್ಕಳನ್ನು ಇಟ್ಟುಕೊಂಡಿರುತ್ತಾರೆ.

* ಯಾವಾಗ ಸರಿಯಾದ ಜ್ಞಾನೋದಯವಾಗು ವುದೊ ಆಗ ಎಲ್ಲಾ ವಸ್ತುಗಳು ಚೈತನ್ಯಮಯವಾಗಿ ತೋರುತ್ತವೆ. ನಾನು ಊರಿನಲ್ಲಿದ್ದಾಗ ಆಗಾಗ ನನ್ನ ಅಣ್ಣನ ಮಗ ಶಿವನೊಡನೆ ಹರಟುತ್ತಿದ್ದೆ. ಶಿವು ಅತ್ಯಂತ ಚಿಕ್ಕ ಹುಡುಗ – ನಾಲ್ಕೋ ಐದೋ ವರ್ಷ ಇರಬೇಕು. ಒಂದು ದಿನ ಮುಗಿಲು ಗುಡುಗುತ್ತಿತ್ತು. ಆಕಾಶ ಮಿಂಚು ತ್ತಿತ್ತು. ಆಗ ಶಿವು ಹೇಳಿದ: 'ಚಿಕ್ಕಪ್ಪ, ನೋಡಲ್ಲಿ! ಯಾರೊ ಬೆಂಕಿಕಡ್ಡಿ ಗೀಚೋದ!' ಎಂದು. ಒಂದು ದಿವಸ ನೋಡುತ್ತೇನೆ, ಒಬ್ಬನೆ ಹಸುರುಚಿಟ್ಟೆ ಹಿಡಿ ಯಲು ಹೋಗುತ್ತಿದ್ದಾನೆ. ಹತ್ತಿರದಲ್ಲಿದ್ದ ಮರದ ಎಲೆಗಳು ಅಲ್ಲಾಡಿದುವು. ಆಗ ಅವನು ಎಲೆಗಳಿಗೆ ಹೇಳಿದ: 'ಚುಪ್ ಚುಪ್! ನಾನು ಚಿಟ್ಟೆ ಹಿಡಿಯುತ್ತಿದ್ದೇನೆ' ಎಂದು. ಇನ್ನೂ ಬಾಲಕ, ಅವನಿಗೆ ಎಲ್ಲಾ ಚೈತನ್ಯಮಯವಾಗಿ ಕಾಣುತ್ತಿದೆ! ಸರಳ ವಿಶ್ವಾಸ, ಹಸುಳೆಯ ವಿಶ್ವಾಸ ಇಲ್ಲದಿದ್ದರೆ ಭಗವಂತನನ್ನು ಪಡೆಯ ಲಾಗುವುದಿಲ್ಲ.

* ಮನುಷ್ಯ ಉದಾರಿ, ಸರಳ ಆಗದಿದ್ದರೆ, ಭಗವಂತನ ಸಾಕ್ಷಾತ್ಕಾರವನ್ನು ಪಡೆಯಲಾರ. ಕಪಟಿಗಳಿಗೆ ಆತ ಬಹಳ ದೂರ.

* ಘೋಷ್ಪಾರದ ವೈಷ್ಣವರು ಭಗವಂತನನ್ನು 'ಸಹಜ' ಅಂದರೆ 'ಸರಳ' ಅಂತ ಕರೆಯುತ್ತಾರೆ. ಅವರು ಹೇಳುತ್ತಾರೆ: ಮನುಷ್ಯ ಸರಳನಾಗದ ಹೊರತು ಸರಳನನ್ನು ಅರಿಯಲಾಗುವುದಿಲ್ಲ ಎಂದು.

* ಭಗವಂತನ ಪ್ರಾರ್ಥನೆ ಮಾಡುವಾಗ ಯಾವುದಾದರೂ ಒಂದು ಭಾವವನ್ನು ಆಶ್ರಯಿಸಬೇಕು – ಸಖೀಭಾವವನ್ನೊ, ದಾಸೀ ಭಾವವನ್ನೊ, ಸಂತಾನ ಭಾವವನ್ನೊ ಅಥವಾ ವೀರಭಾವವನ್ನೊ. ನನ್ನದು ಸಂತಾನಭಾವ. ಈ ಭಾವವನ್ನು ನೋಡಿದೊಡನೆಯೇ ಮಾಯಾದೇವಿ ದಾರಿ ಬಿಟ್ಟು ನಿಂತುಕೊಳ್ಳುತ್ತಾಳೆ – ಲಜ್ಜೆಪಟ್ಟುಕೊಂಡು.

* ಒಬ್ಬನಿಗೆ ಒಬ್ಬಳು ಮಗಳಿದ್ದಳು. ಬಹಳ ಚಿಕ್ಕವಳಿರುವಾಗಲೆ ಆಕೆ ವಿಧವೆಯಾಗಿ ಬಿಟ್ಟಳು. ಆಕೆ ಪತಿಯನ್ನು ಅರಿತವಳೇ ಅಲ್ಲ; ತನ್ನ ಜೊತೆಗಾತಿಯರ ಪತಿಗಳನ್ನು ಕಂಡು ಒಂದು ದಿನ ಆಕೆ ತನ್ನ ತಂದೆಯನ್ನು ಕೇಳಿದಳು:'ಅಪ್ಪ, ನನ್ನ ಪತಿ ಎಲ್ಲಿದ್ದಾರೆ?'' ಆಕೆಯ ತಂದೆ ಹೇಳಿದ: 'ಗೋವಿಂದನೇ ನಿನ್ನ ಪತಿ. ಕರೆ, ಬರುತ್ತಾನೆ.' ಈ ಮಾತನ್ನು ಕೇಳಿ ಆ ಹುಡುಗಿ ಕೊಠಡಿಯ ಬಾಗಿಲು ಹಾಕಿಕೊಂಡು ಗೋವಿಂದನನ್ನು ಕರೆಯುತ್ತ ಅಳಲಾರಂಭಿಸಿದಳು. 'ಓ ಗೋವಿಂದ, ದಯವಿಟ್ಟು ಬಾ! ಕೃಪೆಯಿಟ್ಟು ನಿನ್ನ ದರ್ಶನಕೊಡು! ನೀನು ಏಕೆ ಬರುತ್ತಿಲ್ಲ ಹೇಳು?' ಆ ಚಿಕ್ಕ ಹುಡುಗಿಯ ಹೃದಯವಿದ್ರಾವಕ ಅಳುವನ್ನು ನೋಡಿ ಆಕೆಗೆ ಭಗವಂತ ದರ್ಶನ ಕೊಡದೆ ಇರಲಾಗ ಲಿಲ್ಲ. ಆಕೆಗೆ ದರ್ಶನವಿತ್ತ.

ಶ್ರೀರಾಮಕೃಷ್ಣ ವಚನವೇದದಿಂದ

# ನೌಮಿ ಗುರುವಿವೇಕಾನಂದಮ್

ಆಂಗ್ಲಮೂಲ: **ಸ್ವಾಮಿ ಚೇತನಾನಂದ** ಅನು: **ಮಾತಾ ತ್ಯಾಗಮಯೀ**

**ಸ್ವಾಮಿ ವಿವೇಕಾನಂದರ ಮಹಾಚೇತನವು ಅಸಂಖ್ಯಾತ ಜೀವಿಗಳಿಗೆ ಗುರುರೂಪದಲ್ಲಿ ಬೆಳಕನ್ನು ನೀಡುತ್ತಿದೆ. ಗುರುಗೀತೆಯ ಸ್ತೋತ್ರವೊಂದರ ಹಿನ್ನೆಲೆಯಲ್ಲಿ ಅವರ ವ್ಯಕ್ತಿತ್ವವನ್ನು ಕಾಣುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ. ರಾಮಕೃಷ್ಣ ಮಹಾಸಂಘದ ಆಂಗ್ಲ ಮಾಸಪತ್ರಿಕೆ 'Vedanta Kesari' ಯಲ್ಲಿ ಪ್ರಕಟವಾದ ಈ ಲೇಖನದ ಪ್ರಮುಖ ಭಾಗಗಳನ್ನು ಕನ್ನಡಕ್ಕೆ ತಂದಿರುವ ಅನುವಾದಕರು ಚಳ್ಳಕೆರೆ ಶ್ರೀಶಾರದಾಶ್ರಮದ ಮುಖ್ಯಸ್ಥರು. ಇವರು ಉತ್ತಮ ವಾಗ್ಮಿಗಳು ಹಾಗೂ ಬರಹಗಾರರು. ಇವರ ಅನೇಕ ಲೇಖನಗಳು ಈಗಾಗಲೇ ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ.**

### ಸ್ವಾಮಿ ವಿವೇಕಾನಂದರ ದೇಶಕಾಲಾತೀತ ವ್ಯಕ್ತಿತ್ವ ಮತ್ತು ಸಂದೇಶ

ಸ್ವಾಮಿ ವಿವೇಕಾನಂದರ ವ್ಯಕ್ತಿತ್ವ ಅದೊಂದು ಅದ್ಭುತ. ಅವರ ಧೀರ ಆಕರ್ಷಕ ಭಾವಚಿತ್ರಗಳನ್ನು ನೋಡಿದಾಗ, ಅವರ ಶಕ್ತಿಪೂರ್ಣ ಮಾತುಗಳನ್ನು ಆಲಿಸಿದಾಗ, ಅವರು ತಮ್ಮ ಅಲ್ಪಾಯುಸ್ಸಿನಲ್ಲಿ ಸಾಧಿಸಿದ ಅದ್ಭುತವನ್ನು ಕಂಡು ಬೆರಗಾಗದಿರಲಾರೆವು. ಅವರು ೧೫೦ ವರ್ಷಗಳ ಹಿಂದೆ ಕೇವಲ ೩೯ ವರ್ಷ ೫ ತಿಂಗಳು ೨೪ ದಿನಗಳ ಬದುಕಿದ್ದರೂ, ಅವರ ಸಾರ್ವಜನಿಕ ಕಾರ್ಯವೆಂಬುದು ನಡೆದುದು ಕೇವಲ ಕೊನೆಯ ಎಂಟು ವರ್ಷಗಳಲ್ಲಿ. ಅವರು ಒಂದೆಡೆ ಹೇಳಿದ್ದಾರೆ, ''ಮುಂದಿನ ೧೫೦೦ ವರ್ಷಗಳಿಗೆ ಬೇಕಾಗುವಷ್ಟು ಸಂದೇಶವನ್ನು ನಾನು ನೀಡಿದ್ದೇನೆ.'' ಅವರು ಅಪರೂಪದ ಸಂದರ್ಭದಲ್ಲಿ ತಮ್ಮ ಕುರಿತು ಹೀಗೆ ಹೇಳಿದ್ದಾರೆ, ''ನಾನು ಎಷ್ಟೋ ಶತಮಾನಗಳ ನಂತರ ಜನಿಸಿದ ವ್ಯಕ್ತಿಯಂತೆ ನನಗೆ ಅನ್ನಿಸುತ್ತದೆ.''

ಸೋದರಿ ಕ್ರಿಸ್ಟೀನಾ ಬರೆಯುವಂತೆ, ಸ್ವಾಮೀಜಿ 'ancient but not aged' – ಪ್ರಾಚೀನ ಆದರೆ ಯೌವನಭರಿತ ವ್ಯಕ್ತಿ. ಅವರು ವಯೋಮಾನಕ್ಕೆ ಅತೀತರು; ಸನಾತನವಾದ ಶಾಶ್ವತ ಜ್ಞಾನದ ಗಣಿ. ಕೆಲವೊಮ್ಮೆ ಸ್ವಾಮೀಜಿ, ''ನನಗೆ ೩೦೦ ವರ್ಷ ಆದಂತೆ ಅನ್ನಿಸುತ್ತದೆ'' ಎಂದಿದ್ದಾರೆ.

ವೇದಾಂತದ ಪ್ರಕಾರ ಬ್ರಹ್ಮವನ್ನು ಅರಿತವನು ಬ್ರಹ್ಮವೇ ಆಗುತ್ತಾನೆ. ಅವನು ದೇಶ ಕಾಲ ನಿಮಿತ್ತಗಳನ್ನು ಮೀರಿ ಬೆಳೆಯುತ್ತಾನೆ. ಸ್ವಾಮೀಜಿ ಬ್ರಹ್ಮಜ್ಞಾನಿ. ಆದ್ದರಿಂದ ಅವರು ಭೂತಕಾಲದಲ್ಲಿ ಇದ್ದರು, ವರ್ತಮಾನದಲ್ಲಿ ಇದ್ದಾರೆ, ಭವಿಷ್ಯದಲ್ಲಿ ಎಂದೆಂದೂ ಇರುತ್ತಾರೆ. ಸ್ವಾಮೀಜಿ ನಮಗೆ ಮಂತ್ರದೀಕ್ಷೆಯನ್ನು ನೀಡದಿದ್ದರೂ, ನಮ್ಮ ಆತ್ಮಕ್ಕೆ, ಮನಸ್ಸು-ಬುದ್ಧಿಗಳಿಗೆ ದೀಕ್ಷೆಯನ್ನು ನೀಡಿದವರು. ಅವರು ನಮ್ಮ ಬುದ್ಧಿ-ಮನದೊಳಗಿನ ಅಜ್ಞಾನದ ಅಂಧಕಾರವನ್ನು ಹೋಗಲಾಡಿಸಿ ವಿವೇಕಜ್ಯೋತಿಯನ್ನು ಬೆಳಗಿಸಿದ ಗುರು. ಒಂದು ದೀಪ ತನ್ನ ಬೆಳಕನ್ನು ಒಂದಿನಿತೂ ಕಡಿಮೆಯಾಗಿಸದೆ ಸಾವಿರ ಸಾವಿರ ದೀಪಗಳನ್ನು ಬೆಳಗಿಸುವಂತೆ, ಸ್ವಾಮೀಜಿ ತಮ್ಮ ಶಕ್ತಿ ಹಾಗೂ ಆದರ್ಶದ ಬೆಂಕಿಯನ್ನು ಸಮಸ್ತ ಮಾನವತೆಗೆ ಹೊತ್ತಿಸಿದ್ದಾರೆ. ಅವರು ೧೮೯೫ರಲ್ಲಿ ಸ್ವಾಮಿ ಬ್ರಹ್ಮಾನಂದರಿಗೆ ಹೀಗೆ ಬರೆದರು:



''ತಾಯಿಯ ಕೃಪೆಯಿಂದ ನಾನೊಬ್ಬನೇ ಇಂದು ನೂರು ಸಾವಿರ ಜನರಿಗೆ ಸರಿಸಮನಾಗಿದ್ದೇನೆ. ಮತ್ತು ಮುಂದೆ ಎರಡು ಮಿಲಿಯ ಜನರಿಗೆ ಸರಿಸಮಾನವಾಗಲಿದ್ದೇನೆ.' ಇಂದು ಸ್ವಾಮೀಜಿ ವಿಶ್ವದಾದ್ಯಂತ ಮಿಲಿಯ ಮಿಲಿಯ ಜನಗಳ ಬುದ್ಧಿ-ಹೃದಯದಲ್ಲಿ ನೆಲಸಿ ಕ್ರಾಂತಿಯನ್ನು ಮಾಡುತ್ತಿದ್ದಾರೆ.

## ಸ್ವಾಮೀಜಿಯವರ ದೈವೀರೂಪ

ಭಗವಂತ ಸತ್ಯ, ಶಿವ, ಸುಂದರ. ಸ್ವಾಮೀಜಿ ನೋಡಲು ಬಹಳ ಸುಂದರವಾಗಿದ್ದರು. ಸುಂದರವಾದುದನ್ನು ಆದರಿಸುವುದು, ಮೆಚ್ಚುವುದು ಮನುಷ್ಯನಿಗೆ ಸ್ವಭಾವ ಸಹಜ. ನಾವು ಸ್ವಾಮೀಜಿಯವರ ಸ್ಮೃತಿಚಿತ್ರಗಳನ್ನು ಓದಿದಾಗ ಅದರಲ್ಲಿ ಪ್ರತಿಯೊಬ್ಬರೂ ಅವರ ಸೌಂದರ್ಯವನ್ನು, ಅದರಲ್ಲೂ ಅವರ ವಿಶಾಲ ಕಮಲ ನಯನಗಳನ್ನು ವಿವರಿಸಿರುವುದನ್ನು ನೋಡುತ್ತೇವೆ. ಶ್ರೀರಾಮಕೃಷ್ಣರು ನರೇಂದ್ರನಿಗೆ ಹೇಳಿದ್ದರು, ''ನಿನ್ನ ಕಣ್ಣುಗಳು ನೀನು ಒಣ ಜ್ಞಾನಿಯಲ್ಲ, ಬದಲಾಗಿ ಭಕ್ತ ಎಂಬುದನ್ನು ಸಾರುತ್ತವೆ.'' ಬಾಹ್ಯ ದೃಷ್ಟಿಯಿಂದ ಸ್ವಾಮೀಜಿ ಮಾಯಾತೀತ ಸಂನ್ಯಾಸಿವರರಾಗಿದ್ದರು, ಆದರೆ ಅವರದು ಕೋಟಿ ತಾಯಂದಿರ ಹೃದಯ. ಸ್ವಾಮೀಜಿ **ಶ್ರೀರಾಮಕೃಷ್ಣ ಆರಾತ್ರಿಕ ಸ್ತೋತ್ರ**ದಲ್ಲಿ ಬರೆದಿದ್ದಾರೆ, **''ಜ್ಞಾನಾಂಜನ ವಿಮಲ ನಯನ ವೀಕ್ಷಣೇ ಮೋಹ ಜಾಯ್''** – ಸ್ವಾಮೀಜಿಯವರ ದೃಷ್ಟಿಯೂ ಹಾಗೆಯೇ – ಜ್ಞಾನವೆಂಬ ಅಂಜನದಿಂದ ವಿಮಲವಾದ ನಯನಗಳು; ವೀಕ್ಷಣಮಾತ್ರದಿಂದ ನಮ್ಮ ಮೋಹವನ್ನು ನಾಶ ಮಾಡುತ್ತವೆ. ಸ್ವಾಮೀಜಿಯವರ ದೃಷ್ಟಿಯನ್ನು ಧ್ಯಾನಿಸಿ ನಾವು ಮೋಹ, ದುರ್ಬಲತೆ ಮತ್ತು ಅಪವಿತ್ರತೆಗಳಿಂದ ಪಾರಾಗುತ್ತೇವೆ.

ಭಗವಂತನನ್ನು ಸದಾ ಧ್ಯಾನಿಸುವವರು ಅಥವಾ ಮಹಾತ್ಮರ ಚಿಂತನೆಯನ್ನು ಮಾಡುವವರು ಶಾಂತ ಮುಖಮುದ್ರೆ ಹಾಗೂ ಉಜ್ವಲ ನೇತ್ರಗಳಿಂದ ಕೂಡಿರುತ್ತಾರೆ. ದುಷ್ಟಚಿಂತನೆಗಳಲ್ಲಿ ತೊಡಗಿದವರ ಮುಖ ಬಾಡಿರುತ್ತದೆ ಹಾಗೂ ಕಣ್ಣುಗಳು ಕಳಾಹೀನವಾಗಿರುತ್ತವೆ. ಸ್ವಾಮೀಜಿಯವರನ್ನು ಕುರಿತು ತಮ್ಮ ಸ್ಮೃತಿಚಿತ್ರದಲ್ಲಿ ಲಿಲಿಯನ್ ಮೊಂಟೆಗೊಮೇರಿ ಬರೆಯುತ್ತಾಳೆ, ''ಅವರ ಕಣ್ಣುಗಳು ವಿಶಾಲ, ಅತಿಸುಂದರ ಹಾಗೂ ಅಂತರ್ಮುಖ – ಅದು ನಮ್ಮ ಪಾಶ್ಚಾತ್ಯ ಜಗತ್ತಿಗೆ ಪೂರ್ಣವಾಗಿ ಹೊಸದು. ಅವು ಸ್ವಲ್ಪ ಉಬ್ಬಿಕೊಂಡಿದ್ದವು – ಹಾಗೆಂದು ಅವು ಅವರ ಮುಖವರ್ಚಸ್ಸಿಗೆ ವಿರುದ್ಧವಾಗಿರಲಿಲ್ಲ. ಅವರ ಕಣ್ಣುಗಳು ಸಹಜ ಗಾತ್ರದ್ದೇ ಆಗಿದ್ದವು. ಆದರೆ ಅವರ ದೃಷ್ಟಿ ಒಳಮುಖವಾಗಿತ್ತು. ಅದು ವಿಶೇಷ.''

೧೯೬೩ರಲ್ಲಿ ಸ್ವಾಮೀಜಿಯವರ ಜನ್ಮಶತಮಾನೋತ್ಸವ ವರ್ಷದಲ್ಲಿ, ಅದ್ವೈತ ಆಶ್ರಮದಲ್ಲಿ ನಾನು ಒಬ್ಬ ಹಿರಿಯ ವ್ಯಕ್ತಿಯನ್ನು ಭೇಟಿಯಾದೆ. ಅವನು ಸ್ವಾಮೀಜಿಯವರ ೭೧ ಭಾವಚಿತ್ರಗಳನ್ನು ತನ್ನ ಕೋಣೆಯ ಗೋಡೆಗಳ ಮೇಲೆ ತೂಗುಹಾಕಿದ್ದನು. ಅವನು ನನಗೆ ಹೇಳಿದನು, ''ನನಗೆ ಧ್ಯಾನ ಮಾಡಲು ಬರದು. ನಾನು ಪ್ರತಿಯೊಂದು ಭಾವಚಿತ್ರದ ಮುಂದೆ ಒಂದು ನಿಮಿಷ ನಿಂತುಕೊಳ್ಳುತ್ತೇನೆ. ಹೀಗೆ ನಾನು ಪ್ರತಿದಿನ ೭೧ ನಿಮಿಷ ಧ್ಯಾನ ಮಾಡುತ್ತೇನೆ.'' ಸ್ವಾಮೀಜಿಯವರ ನಿಜವಾದ ಭಕ್ತ ಅವನು!

## ಸ್ವಾಮೀಜಿಯವರ ಮಾನವೀಯತೆ

ಸ್ವಾಮೀಜಿ ಬೇಲೂರು ಮಠದಲ್ಲಿ ಒಂದು ವರ್ಷ, ಆರು ತಿಂಗಳು, ೨೬ ದಿನಗಳು ವಾಸಿಸಿದ್ದರು. ಅವರ ಅಂತಿಮ ದಿನಗಳಲ್ಲಿ ಅವರಿಗೆ ಉದ್ಯಾನದ ಕೆಲಸ ಬಹಳ ಪ್ರಿಯವಾಗಿತ್ತು. ರೋಮೆ ರೋಲಾ ಆ ದಿನಗಳನ್ನು ಕುರಿತು ಬರೆಯುತ್ತಾನೆ, ''ಶಾಕುಂತಲದಲ್ಲಿ ಬರುವ ಋಷಿಗಳ ಹಾಗೆ ಅವರು ತಮ್ಮ ಪ್ರಿಯ ಸಾಕುಪ್ರಾಣಿಗಳಿಂದ ಸುತ್ತುವರಿದಿದ್ದರು – ನಾಯಿ ಬಾಘಾ, ಹಂಸಿ ಆಡು, ಅದರ ಮರಿ ಮಾತೃ. ಪುಟ್ಟ ಪುಟ್ಟ ಗಂಟೆಗಳನ್ನು ಬಿಗಿದುಕೊಂಡಿದ್ದ ಮಾತೃವಿನ ಹಿಂದೆ ಮುಂದೆ ಓಡಾಡುತ್ತ ಅವರೂ ಮಗುವಿನಂತೆ ಆಟವಾಡುತ್ತಿದ್ದರು. ಜೊತೆಯಲ್ಲಿ ಬಾತುಕೋಳಿಗಳು ಮತ್ತು ಹಸುಗಳು ಬೇರೆ.'' ಅವರು ತಮ್ಮ ಸುಂದರ, ಘನಗಂಭೀರ, ಆಳವಾದ ಧ್ವನಿಯಲ್ಲಿ ಹಾಡುಗಳನ್ನು ಹಾಡುತ್ತ ಅವುಗಳೊಡನೆ ಒಡನಾಡುತ್ತಿದ್ದರು.

ಸ್ವಾಮಿ ನಿರ್ಲೇಪಾನಂದಜಿಯವರು ಬರೆಯುತ್ತಾರೆ: ಒಮ್ಮೆ ಒಬ್ಬ ಕಾಲೇಜು ವಿದ್ಯಾರ್ಥಿ ಬಲರಾಮ ಬೋಸನ ಮನೆಯಲ್ಲಿ ಅವರ ಪಾದಗಳನ್ನು ನೋಡಿ ಉದ್ಗರಿಸುತ್ತಾನೆ, ''ಸ್ವಾಮೀಜಿ, ತಮ್ಮ ನರಮಂಡಲಗಳು ಎಷ್ಟು ಸುಂದರವಾಗಿವೆ!'' ಸ್ವಾಮೀಜಿ ನಮ್ರರಾಗಿಯೇ ಉತ್ತರಿಸುತ್ತಾರೆ, ''ಹೌದು, ಅದು ಸರಿಯಾಗಿಯೇ ಇದೆ. ಶ್ರೀರಾಮಕೃಷ್ಣರು ನನ್ನನ್ನು ನೋಡಿ ಪ್ರೀತಿಸುತ್ತಿದ್ದರು.'' ಸ್ವಾಮೀಜಿ ಸೌಂದರ್ಯದ ಮೂರ್ತರೂಪ. ಅವರ ರೂಪ, ಗುಣ, ಮಾತುಕತೆ, ಉಪನ್ಯಾಸಗಳು, ಭಜನೆ, ಅವರ ವಾದ್ಯ ನುಡಿಸುವಿಕೆ, ಅವರ ಚಲನವಲನ, ಕಾರ್ಯ, ನಗು, ಕಂಬನಿಗಳು, ಪರದುಃಖ ಕಾತರತೆ, ಧ್ಯಾನ – ಪ್ರತಿಯೊಂದೂ ಅತಿ ಸುಂದರ. ಸ್ವಾಮೀಜಿಯವರಿಗೆ ಸೇರಿದ ಪ್ರತಿಯೊಂದೂ ಅತಿ ಸುಂದರ – ಅವರ ಬೈಗುಳ, ಗದರಿಸುವಿಕೆಗಳೂ ಕೂಡ!

''ಸ್ವಾಮೀಜಿ ನಿನ್ನನ್ನು ಯಾವತ್ತಾದರೂ ಗದರಿಸಿದ್ದರೇನು?'' ಎಂದು ಸ್ವಾಮಿ ಅಶೋಕಾನಂದಜಿಯವರು ಶ್ರೀಮತಿ ಆ್ಯಲಿಸ್ ಹ್ಯಾನ್ಸ್‌ಬ್ರೋ ಅವರನ್ನು ಕೇಳಿದರು. ಅದಕ್ಕೆ ಅವಳು, ''ಓ, ಹೌದು; ಆಗಾಗ. ಅವರು ಯಾವಾಗಲೂ ನಮ್ಮಲ್ಲಿನ ತಪ್ಪುಗಳನ್ನು ಕಂಡುಹಿಡಿಯುತ್ತಿದ್ದರು. ಕೆಲವು ಸಲ ಚೆನ್ನಾಗಿಯೇ ಗದರಿಸುತ್ತಿದ್ದರು'' ಎಂದಳು. ''ನನ್ನೊಡನೆ ಕೆಲಸ ಮಾಡಲು ತಾಯಿ ಮೂರ್ಖರನ್ನು ಕಳುಹಿಸಿಕೊಟ್ಟಿದ್ದಾಳೆ'' ಎಂದು ಅವರು ಹೇಳುತ್ತಿದ್ದರು, ''ನಿಮ್ಮಂತಹ ಮಂಕುದಿಣ್ಣೆಗಳ ಜೊತೆ ನಾನು ಒಡನಾಡಬೇಕಾಗಿದೆ'' ಎಂದು ಉದ್ಗರಿಸುತ್ತಿದ್ದರು. ''ನಾನು ಯಾವತ್ತೂ ಕ್ಷಮೆ ಯಾಚಿಸುವುದಿಲ್ಲ'' ಎಂದು ಅವರೇ ಹೇಳಿದ್ದರೂ, ಆಮೇಲೆ ಅವರು ನಮ್ಮನ್ನು ಹುಡುಕಿಕೊಂಡು ಬರುತ್ತಿದ್ದರು, ಮತ್ತು ಬೆಣ್ಣೆಯೂ ಕರಗುವಂತೆ ಬಹಳ ಮೃದುವಾದ ಧ್ವನಿಯಲ್ಲಿ, ''ನೀನು ಏನು ಮಾಡುತ್ತಿದ್ದೀಯಾ?'' ಎಂದು ಕೇಳುತ್ತಿದ್ದರು. ಇದು ತಾವು ಗದರಿಸಿದುದನ್ನು ಮರೆಮಾಚುವ ಪ್ರಯತ್ನ ಎಂಬುದು ಸ್ಫುಟವಾಗಿತ್ತು. ಅವರು ಹೇಳುತ್ತಿದ್ದರು, ''ನಾನು ಯಾರನ್ನು ಅಧಿಕವಾಗಿ ಪ್ರೀತಿಸುತ್ತೇನೆಯೋ ಅವರನ್ನು ಹೆಚ್ಚೆಚ್ಚು ಬಯ್ಯುತ್ತೇನೆ.''

*ಗುರುಗೀತೆ* ಹೇಳುತ್ತದೆ:

**ಧ್ಯಾನಮೂಲಂ ಗುರೋರ್ಮೂರ್ತಿಃ ಪೂಜಾಮೂಲಂ ಗುರೋಃಪದಂ ।**
**ಮಂತ್ರಮೂಲಂ ಗುರೋರ್ವಾಕ್ಯಂ ಮೋಕ್ಷಮೂಲಂ ಗುರೋಃಕೃಪಾ ॥**

*'ಗುರುವಿನ ರೂಪವನ್ನು ಧ್ಯಾನಿಸು. ಗುರುವಿನ ಪಾದಗಳನ್ನು ಪೂಜಿಸು. ಗುರುವಿನ ಮಾತುಗಳನ್ನು ಮಂತ್ರವೆಂದು ಸ್ವೀಕರಿಸು.*

*ಗುರುವಿನ ಕೃಪೆಯಿಂದ ಮೋಕ್ಷ.'* ಈಗ ನಾವು ಶ್ರೇಷ್ಠ ಗುರು ಸ್ವಾಮಿ ವಿವೇಕಾನಂದರ ಜೀವನ, ಸಂದೇಶಗಳನ್ನು ಈ ಶ್ಲೋಕಕ್ಕೆ ಅನ್ವಯಿಸಲು ನೋಡೋಣ.

### ಧ್ಯಾನಮೂಲಂ ಗುರೋರ್ಮೂರ್ತಿಃ

ಸ್ವಾಮೀಜಿ ನಿತ್ಯ ಸಮಾಧಿಯಲ್ಲಿ ನಿಮಗ್ನರಾದ ಸಪ್ತರ್ಷಿಗಳಲ್ಲಿ ಒಬ್ಬರಾಗಿದ್ದರು. ಶ್ರೀರಾಮಕೃಷ್ಣರು ತಮ್ಮ ಅವತಾರೋದ್ದೇಶಕ್ಕಾಗಿ ಅವರನ್ನು ಕರೆದುಕೊಂಡು ಬಂದಿದ್ದರು. ಶ್ರೀರಾಮಕೃಷ್ಣರು ತಮ್ಮ ಭಕ್ತರಿಗೆ, ''ನರೇಂದ್ರ ಪ್ರಾಚೀನ ಋಷಿ. ನರ-ನಾರಾಯಣನ ಅವತಾರ. ಅವನು ಧ್ಯಾನಸಿದ್ಧ'' ಎಂದು ಹೇಳಿದ್ದರು. ಸ್ವಾಮೀಜಿ ಧ್ಯಾನಪರರಾದ್ದರಿಂದ ನಾವೂ ಅವರನ್ನು ಧ್ಯಾನದಿಂದ ಪಡೆಯಬಹುದು. ಧ್ಯಾನ ಮತ್ತು ಪ್ರಾರ್ಥನೆಯಿಂದ ಅವರನ್ನು ನಮ್ಮ ಹೃದಯದಲ್ಲಿ ಜೀವಂತವಾಗಿಸಿಕೊಳ್ಳಬೇಕು.

ಸ್ವಾಮೀಜಿಯವರ ಮಹಾಸಮಾಧಿಯಾಗಿ ೧೫ ವರ್ಷಗಳಾದ ಮೇಲೆ ಹಿಮಾಲಯದ ಏಕಾಂತ ಪ್ರದೇಶದಲ್ಲಿ , ಮಾಯಾವತಿ ಅದ್ವೈತ ಆಶ್ರಮದಲ್ಲಿ ಶ್ರೀಮತಿ ಚಾರ್ಲೆಟ್ ಸೇವಿಯರ್ ತಮ್ಮ ಗುರುದೇವನ ಕಾರ್ಯವನ್ನು ಮಾಡುತ್ತಿದ್ದರು. ಒಂದು ಸಲ ಜೋಸೆಫಿನ್ ಮೆಕ್‌ಲಾಡ್ ಅವರನ್ನು ಕೇಳಿದಳು, ''ನಿನಗೆ ಬೇಸರವಾಗುವುದಿಲ್ಲವೆ?'' ಶ್ರೀಮತಿ ಸೇವಿಯರ್ ಹೇಳುತ್ತಾರೆ, ''ನಾನು ಸ್ವಾಮೀಜಿಯವರನ್ನು ಸದಾಕಾಲ ಸ್ಮರಿಸುತ್ತಿರುತ್ತೇನೆ.'' ಇನ್ನೊಂದು ಸಂದರ್ಭದಲ್ಲಿ ಅವರು ಒಬ್ಬ ಸಂನ್ಯಾಸಿಗೆ ಹೇಳುತ್ತಾರೆ, ''ನಾನು ಸ್ವಾಮೀಜಿಯವರ ಹೆಸರನ್ನು ಧ್ಯಾನಿಸುತ್ತಿರುತ್ತೇನೆ.'' ಇದು ನಿಜವಾದ ಗುರುಭಕ್ತಿ. ನಾವು ಯಾರನ್ನು ಪ್ರೀತಿಸುತ್ತೇವೆಯೋ ಅವರು ನಮ್ಮ ಹೃದಯದಲ್ಲಿ ನೆಲಸುತ್ತಾರೆ.

ನಾವು ಸ್ವಾಮೀಜಿಯವರನ್ನು ಚರ್ಮಚಕ್ಷುಗಳಿಂದ ನೋಡಿಲ್ಲ; ಆದರೆ ಅವರ ೯೫ ಭಾವಚಿತ್ರಗಳನ್ನು ನೊಡಿದ್ದೇವೆ. ಅವರು ಬೇರೆ ಬೇರೆ ಚಿತ್ರಗಳಲ್ಲಿ ಬೇರೆ ಬೇರೆ ಬಗೆಯಾಗಿ ಕಾಣಸುತ್ತಾರೆ. ಅವನ್ನು ನೋಡಿದಾಗ ಸ್ವಾಮೀಜಿ ಹೇಗಿದ್ದಿರಬಹುದು ಎಂದು ನಮಗೆ ಕುತೂಹಲವಾಗುತ್ತದೆ. ಕೆಲವು ಪ್ರತ್ಯಕ್ಷದರ್ಶಿಗಳ ಮಾತುಗಳು ಇಲ್ಲಿವೆ:

ಸ್ವಾಮೀಜಿಯವರ ರೂಪ ಹೇಗಿತ್ತು ಎಂದು ಸ್ವಾಮಿ ಶಾರದಾನಂದಜಿಯವರನ್ನು ಕೇಳಿದಾಗ ಅವರು ಸ್ವಲ್ಪಹೊತ್ತು ಮೌನ ತಾಳಿದರು. ಬಳಿಕ ಉದ್ಗರಿಸಿದರು, ''ಸ್ವಾಮೀಜಿಯವರ ಆಕರ್ಷಕ ಕಣ್ಣುಗಳನ್ನು ನಾನು ಹೇಗೆ ತಾನೆ ವರ್ಣಿಸಲಿ? ನಾನು ಇಷ್ಟನ್ನೇ ಹೇಳಬಲ್ಲೆ, ನಮಃ ಪಂಕಜನೇತ್ರಾಯ.'' ಇನ್ನೊಬ್ಬರು ಹೇಳಿದರು, ''ಸ್ವಾಮೀಜಿ ಒಮ್ಮೆ ಬಲರಾಮ ಬೋಸ್‌ನ ಮನೆಯಲ್ಲಿ ಮಲಗಿದ್ದಾಗ, ಅವರ ಕಣ್ಣುಗಳು ಪೂರ್ತಿಯಾಗಿ ಮುಚ್ಚಿರಲಿಲ್ಲ. ಅವು ಅರ್ಧ ಮುಚ್ಚಿದ್ದವು. ಅವರ ಕಣ್ಣುರೆಪ್ಪೆಗಳು ಪರಸ್ಪರ ಒಂದುಗೂಡುತ್ತಿರಲಿಲ್ಲ. ಅವು ಶಿವನ ಧ್ಯಾನನಿಮೀಲಿತ ನೇತ್ರಗಳು.''

ಸಾಮೀಜಿಯವರ ತಮ್ಮ ಮಹೇಂದ್ರನಾಥ ದತ್ತ ಬರೆಯುತ್ತಾನೆ, ''ಒಮ್ಮೆ ಬಾಗ್‌ಬಜಾರಿನ ಗಿರೀಶ ಘೋಷನ ಮನೆಗೆ ಬಂದ ಒಬ್ಬ ಜ್ಯೋತಿಷಿ ನರೇಂದ್ರನ ಬಲಪಾದಗಳನ್ನು ನೋಡಿ, 'ಈ ಯುವಕನ



ಪಾದಗಳಲ್ಲಿ ಶಂಖ, ಚಕ್ರ, ವಜ್ರ ಮತ್ತು ಪದ್ಮಗಳು ಇವೆ. ಸಾಮಾನ್ಯ ವ್ಯಕ್ತಿಯ ಪಾದಗಳಲ್ಲಿ ಇವು ಕಾಣಸಿಗುವುದಿಲ್ಲ' ಎಂದು ಉದ್ಗರಿಸುತ್ತಾನೆ. ನರೇಂದ್ರನ ಪಾದಗಳು ಪೂರ್ಣ ಬೆಳವಣಿಗೆಯನ್ನು ಹೊಂದಿದ್ದವು. ಅವು ಉದ್ದವಾಗಿರಲಿಲ್ಲ , ಚಿಕ್ಕದಾಗಿರಲಿಲ್ಲ ; ಅವರ ನೀಳವಾದ ಬೆರಳುಗಳ ತುದಿಯಲ್ಲಿದ್ದ ಉಗುರುಗಳು ಸ್ವಲ್ಪ ಉಬ್ಬಿಕೊಂಡು ರಕ್ತವರ್ಣದವಾಗಿದ್ದವು. ಅವು ಅವರ ಆತ್ಮವಿಶ್ವಾಸ ಮತ್ತು ಮನಸ್ಸಿನ ದೃಢನಿರ್ಧಾರವನ್ನು ಸೂಚಿಸುತ್ತಿದ್ದವು. ಅವರ ನಡಿಗೆ ಮತ್ತು ಚಲನವಲನಗಳು ವೇಗವಾಗಿಯೂ ಇರಲಿಲ್ಲ , ನಿಧಾನವಾಗಿಯೂ ಇರಲಿಲ್ಲ. ಅವರು ಆಳವಾದ ಚಿಂತನೆಯಲ್ಲಿ ತೊಡಗಿದಾಗ ರಾಜಕುಮಾರನ ನಡಿಗೆ ಅವರದಾಗಿತ್ತು. ಅವರು ಉಪನ್ಯಾಸವನ್ನು ಮಾಡುವಾಗ ಅವರ ಘನಚಿಂತನೆಗಳು ಅವರ ಮುಖಮುದ್ರೆ, ಕೈಗಳು ಮತ್ತು ಬೆರಳುಗಳ ಮೂಲಕ ವ್ಯಕ್ತವಾಗುತ್ತಿದ್ದವು. ಆದ್ದರಿಂದ ಅಮೆರಿಕದ ಜನ ಅವರನ್ನು orator by divine right – 'ಭಗವಂತನ ಆದೇಶವನ್ನು ಪಡೆದ ದೈವದತ್ತ ವಾಗ್ಮಿ' ಎಂದು ಕರೆದರು.

ಸೋದರಿ ನಿವೇದಿತಾ ಬರೆಯುತ್ತಾಳೆ, ''ಅವರಿಗೆ ತಮ್ಮ ಮಂಗೋಲಿಯನ್ ಜಾ ಎಂದು ಕರೆಯಲ್ಪಡುವ ದವಡೆಗಳ ಕುರಿತು ಅಭಿಮಾನವಿದ್ದಿತು. ಅದನ್ನವರು ಕಾರ್ಯಸಾಧನೆಯಲ್ಲಿ ದೃಢನಿರ್ಧಾರದ ಸೂಚಕವೆಂದು ಬಗೆದಿದ್ದರು.'' ಅವಳು ಮುಂದುವರೆಸುತ್ತಾಳೆ, ''ಸ್ವಾಮೀಜಿ ಜಪಾನಿನಲ್ಲಿದ್ದಾಗ ಅವರನ್ನು ನೋಡಿದವ

ರೆಲ್ಲರೂ ಬುದ್ಧನೊಂದಿಗೆ ಅವರ ಸಾದೃಶ್ಯವನ್ನು ಕಂಡು ಆಕರ್ಷಿತರಾಗುತ್ತಿದ್ದರು ಎಂದು ಶ್ರೀ ಟಾಟಾ ನನಗೆ ಹೇಳಿದ್ದರು.''

ಅವರು ಹುಟ್ಟಾ ಚಕ್ರವರ್ತಿಯಾಗಿದ್ದರು. ಅವರ ರಾಜಗಾಂಭೀರ್ಯಕ್ಕೆ ಗೌರವ ಕೊಡದಿರಲು ಯಾರಿಂದಲೂ ಸಾಧ್ಯವಿರಲಿಲ್ಲ. ಬೆಟ್ಟಿ ಲಿಗೆಟ್ ಬರೆಯುತ್ತಾಳೆ, ''ನಾನು ಜೀವನದಲ್ಲಿ ಇಬ್ಬರು ಗಮನಾರ್ಹ ವ್ಯಕ್ತಿಗಳನ್ನು ಭೇಟಿಯಾಗಿದ್ದೇನೆ. ಒಬ್ಬ ಜರ್ಮನಿಯ ಕೈಸರ್, ಇನ್ನೊಬ್ಬರು ಸ್ವಾಮಿ ವಿವೇಕಾನಂದರು.''

ಈ ಸಾಕ್ಷಿಗಳು ನಮಗೆ ಸ್ವಾಮೀಜಿಯವರ ರೂಪವನ್ನು ಧ್ಯಾನಿಸಲು ಸಹಾಯಕವಾಗುತ್ತವೆ. ನಾವು ನಮ್ಮ ಧ್ಯಾನವನ್ನು ರೂಪಕ್ಕಷ್ಟೇ ಪರಿಮಿತಗೊಳಿಸಬಾರದು; ನಾವು ಅವರ ಜೀವನ ಸಂದೇಶಗಳನ್ನು ಧ್ಯಾನಿಸಿದಷ್ಟೂ ನಮ್ಮ ಮನಸ್ಸು ಶಕ್ತಿಶಾಲಿಯಾಗುತ್ತದೆ ಮತ್ತು ನಮ್ಮ ಅಂತಃಪ್ರಜ್ಞೆ ಜಾಗೃತವಾಗುತ್ತದೆ.

### ಪೂಜಾಮೂಲಂ ಗುರೋಃಪದಂ

ಭಾರತದಲ್ಲಿ ಭಗವಂತನನ್ನು, ಗುರುವನ್ನು ಮತ್ತು ಸಾಧುಸಂತರನ್ನು ಪೂಜಿಸುವುದು ಪದ್ಧತಿ. ಭಾರತೀಯರು ಧರ್ಮಗುರುಗಳನ್ನು ಪರಮಾದರದಿಂದ ಕಾಣುತ್ತಾರೆ. ೧೯೦೦ರಲ್ಲಿ ಕ್ಯಾಲಿಫೋರ್ನಿಯಾದ ಪಸಾಡೆನದಲ್ಲಿ ಸ್ವಾಮೀಜಿ ತಮ್ಮ 'Budhistic India' ಉಪನ್ಯಾಸದಲ್ಲಿ ಹೇಳುತ್ತಾರೆ: ''ಭಾರತೀಯರು ಒಬ್ಬ ಸಂತನನ್ನು ಪೂಜಿಸಲು ಸಾಯುತ್ತಿದ್ದಾರೆ. ನೀವು ಇನ್ನಷ್ಟು ವರ್ಷ ಬದುಕಿದರೆ, ನಾನು ನಮ್ಮ ಜನರಿಂದ ಪೂಜಿಸಲ್ಪಡುವುದನ್ನು ನೀವು ನೋಡಲಿದ್ದೀರಿ. ನೀವು ಅವರಿಗೆ ಏನನ್ನಾದರೂ ಬೋಧಿಸಲು ಹೋದರೆ, ನೀವು ತೀರಿಕೊಳ್ಳುವುದಕ್ಕೆ ಮೊದಲು ನೀವು ಪೂಜಿಸಲ್ಪಡುವಿರಿ.'' ೧೯೦೦ರಲ್ಲಿ ಸಾನ್‌ಫ್ರಾನ್ಸಿಸ್ಕೋದಲ್ಲಿ ಸ್ವಾಮೀಜಿ ಹ್ಯಾನ್ಸ್‌ಬ್ರೋಗೆ ಹೇಳುತ್ತಾರೆ, ''ನಾನು ತೀರಿಕೊಂಡ ಹತ್ತು ವರ್ಷಗಳಲ್ಲಿ ದೇವರೆಂದು ಪೂಜಿಸಲ್ಪಡುತ್ತೇನೆ.''

ಸ್ವಾಮೀಜಿಯವರ ಮಾತುಗಳು ಅದಕ್ಕಿಂತ ಮೊದಲು ಸತ್ಯವಾದವು. ಅದು ೧೮೯೮ರಲ್ಲಿ ಶ್ರೀರಾಮಕೃಷ್ಣ ಮಠವು ನೀಲಾಂಬರ ಬಾಬುವಿನ ತೋಟದ ಮನೆಯಲ್ಲಿ ಕಾರ್ಯಗತವಾಯಿತು. ಅಲ್ಲಿ ಒಂದು ದಿನ ಶರಚ್ಚಂದ್ರ ಚಕ್ರವರ್ತಿ ಸ್ವಾಮೀಜಿಯವರನ್ನು – ತನ್ನ ಗುರುವನ್ನು, ಸಾಕ್ಷಾತ್ ಶಿವನೆಂದು ಪುಷ್ಪಗಳಿಂದ ಪೂಜಿಸಿದನು. ಪೂಜೆ ಮುಗಿದ ತರುವಾಯ ಅವನಿಗೆ ಸ್ವಾಮೀಜಿ, ''ನೀನೇನೋ ಪೂಜೆಯನ್ನು ಮಾಡಿದೆ. ಆದರೆ ಶ್ರೀರಾಮಕೃಷ್ಣರ ಪೂಜಾತಟ್ಟೆಯಲ್ಲಿ ನನ್ನ ಪಾದಗಳನ್ನು ಇರಿಸಿದುದಕ್ಕೆ ಸ್ವಾಮಿ ಪ್ರೇಮಾನಂದರು ನಿನ್ನನ್ನು ಗದರಿಸಲಿದ್ದಾರೆ'' ಎಂದರು. ಸ್ವಾಮೀಜಿಯವರ ಮಾತು ಮುಗಿಯುವುದರೊಳಗೆ ಸ್ವಾಮಿ ಪ್ರೇಮಾನಂದರು ಬಂದರು. ಸ್ವಾಮೀಜಿ ಅವರಿಗೆ, ''ನೋಡು, ಇವನು ಏನು ಮಾಡಿಬಿಟ್ಟ! ಶ್ರೀರಾಮಕೃಷ್ಣರ ಪೂಜಾಪರಿಕರಗಳಿಂದ ನನ್ನನ್ನು ಪೂಜಿಸಿದ್ದಾನೆ'' ಎಂದರು. ಸ್ವಾಮಿ ಪ್ರೇಮಾನಂದರು ನಕ್ಕು, ''ಸರಿಯಾಗಿ ಮಾಡಿದ್ದಾನೆ. ನೀನು ಮತ್ತು ರಾಮಕೃಷ್ಣರು ಬೇರೆಯೆ?'' ಎಂದರು.

ಸ್ವಾಮೀಜಿಯವರ ಶಿಷ್ಯ ಸ್ವಾಮಿ ಅಚಲಾನಂದರು ಬರೆಯುತ್ತಾರೆ: ಒಂದು ದಿನ ಸ್ವಾಮೀಜಿ ಶ್ರೀರಾಮಕೃಷ್ಣ ಮಂದಿರದ ಕೆಳಗಿನ ವರಾಂಡದಲ್ಲಿ ಗಂಭೀರ ಭಾವದಿಂದ ಕುಳಿತಿದ್ದರು. ಸ್ವಾಮಿ ಬ್ರಹ್ಮಾನಂದರು ಅವರೊಡನೆ ಇದ್ದರು. ನಾನು ಆ ಮಾರ್ಗವಾಗಿ ನಡೆದುಕೊಂಡು ಹೋಗುತ್ತಿದ್ದೆನು. ನನ್ನನ್ನು ನೋಡಿ ಸ್ವಾಮೀಜಿ, ''ಕೆಲವು ಹೂಗಳನ್ನು ತೆಗೆದುಕೊಂಡು ಬಾ'' ಎಂದು ಹೇಳಿದರು. ನಾನು ಹೂಗಳನ್ನು ತೆಗೆದುಕೊಂಡು ಬಂದೆನು. ಅವರು, ''ಈ ಹೂಗಳನ್ನು ನನಗೆ ಅರ್ಪಿಸು. ಪ್ರತಿದಿನ ನನಗೆ ಪೂಜೆ ಮಾಡು'' ಎಂದರು. ಮತ್ತೆ ಹೇಳಿದರು, ''ಹೋಗು, ಇನ್ನೂ ಕೆಲವು ಹೂಗಳನ್ನು ತೆಗೆದುಕೊಂಡು ಬಾ.'' ನಾನು ಹೂವುಗಳನ್ನು ತೆಗೆದುಕೊಂಡು ಬಂದಾಗ, ''ಈಗ ರಾಮಕೃಷ್ಣ ಮಠದ ಅಧ್ಯಕ್ಷನನ್ನು ಪೂಜಿಸು. ಗುರು ಮತ್ತು ಅಧ್ಯಕ್ಷ ಒಂದೇ ಎಂಬುದನ್ನು ನೆನಪಿನಲ್ಲಿಡು. ಆದ್ದರಿಂದ ಅಧ್ಯಕ್ಷನನ್ನು ಪ್ರತಿದಿನ ಪೂಜೆ ಮಾಡು '' ಎಂದರು.

ಸ್ವಾಮೀಜಿ ತಮ್ಮ ಶಿಷ್ಯರಿಗೆ ಶ್ರೀರಾಮಕೃಷ್ಣರನ್ನು ಪೂಜಿಸುವುದು ಹೇಗೆ ಎಂಬುದನ್ನು ತಿಳಿಯಪಡಿಸಿದರು. ಸ್ವಾಮಿ ಅಚಲಾನಂದರು ಬರೆಯುತ್ತಾರೆ: ''ಒಂದು ಸಲ ಬೇಲೂರು ಮಠದಲ್ಲಿ ಸ್ವಾಮಿ ಪ್ರೇಮಾನಂದರು ಪೂಜೆ ಮಾಡಲು ಹೋದರು. ಸ್ವಾಮೀಜಿಯವರೂ ದೇವಸ್ಥಾನಕ್ಕೆ ಬಂದರು. ಅವರು ಆಸನದಲ್ಲಿ ಕುಳಿತುಕೊಂಡು ತಮಗೆ ತಾವೇ ಪೂಜೆ ಮಾಡತೊಡಗಿದರು. ಅವರು ರಾಮಕೃಷ್ಣರ ಪಾದಗಳಿಗೆ ಹಲವು ಸಲ ಪುಷ್ಪಾಂಜಲಿಯನ್ನು ಅರ್ಪಿಸಿದರು. ಬಳಿಕ ತಮ್ಮ ಶಿರಕ್ಕೆ ಹೂವುಗಳನ್ನು ಅರ್ಪಿಸತೊಡಗಿದರು. ಅನಂತರ ಗಾಢ ಧ್ಯಾನಸ್ಥರಾದರು. ಅವರು ಪೂಜಾಗೃಹದಿಂದ ಹೊರಬರುವಾಗ ಅವರ ಮುಖ ಭಕ್ತಿಭಾವದಿಂದ ದೀಪ್ತವಾಗಿತ್ತು. ನಾವೆಲ್ಲ ಅವರಿಗೆ ಶಿರಬಾಗಿದೆವು.''

ಸ್ವಾಮೀಜಿಯವರ ಪೂಜೆ ವಿಶಿಷ್ಟವಾಗಿತ್ತು. ಧ್ಯಾನ ಅವರ ಪಾಲಿನ ಪೂಜೆಯಾಗಿತ್ತು. ಧ್ಯಾನದಿಂದ ಹೊರಬರುವಾಗ ಅವರ ಮುಖ ಅರುಣವರ್ಣದಿಂದ ರಂಜಿತವಾಗುತ್ತಿತ್ತು. ಧ್ಯಾನವೆಂಬ ಪೂಜೆಯಿಂದ ಅವರ ಮನಸ್ಸು ಉನ್ನತ ಭಾವಾಪನ್ನವಾಗಿರುತ್ತಿತ್ತು. ಮೇಲಾಗಿ, ಅವರು ಮನುಷ್ಯನೊಳಗಿರುವ ದೇವರನ್ನು ಪೂಜಿಸುವುದನ್ನು ಕಲಿಸಿಕೊಟ್ಟರು. ಅಜ್ಞಾನಿಗಳನ್ನು, ವಿದ್ಯಾಭ್ಯಾಸದಿಂದ ಹಸಿದವರನ್ನು ಅನ್ನದಿಂದ, ರೋಗಿಗಳನ್ನು ಔಷಧಿಯಿಂದ ಮತ್ತು ಮುಮುಕ್ಷುಗಳನ್ನು ಅಧ್ಯಾತ್ಮ ಜ್ಞಾನದಿಂದ ಪೂಜಿಸುವುದನ್ನು ಕಲಿಸಿಕೊಟ್ಟರು. ಸ್ವಾಮೀಜಿ ತೈತ್ತಿರೀಯ ಉಪನಿಷತ್ತಿನ, '**ಮಾತೃದೇವೋ ಭವ, ಪಿತೃದೇವೋ ಭವ, ಆಚಾರ್ಯದೇವೋ ಭವ, ಅತಿಥಿದೇವೋ ಭವ**' ಎಂಬ ಆದರ್ಶಕ್ಕೆ ''**ದರಿದ್ರದೇವೋ ಭವ**'' ಎಂಬುದನ್ನು ಸೇರಿಸಿದರು. ಅವರು ಅದನ್ನು ತಮ್ಮ ಪತ್ರದಲ್ಲಿ ಸ್ಪಷ್ಟಪಡಿಸುತ್ತಾರೆ: ''ನಾನು ಮತ್ತೆ ಮತ್ತೆ ಹುಟ್ಟಿ ಬಂದು ಸಾವಿರ ಸಾವಿರ ಕಷ್ಟಗಳನ್ನು ಸಹಿಸುವಂತಾಗಲಿ. ತನ್ಮೂಲಕ ನಾನು ನಂಬುವ ಏಕಮಾತ್ರ ದೇವರು – ಪ್ರತಿಯೊಬ್ಬ ಮನುಷ್ಯನನ್ನೂ ಪೂಜಿಸುವಂತಾಗಲಿ. ಎಲ್ಲಕ್ಕಿಂತ ಹೆಚ್ಚಾಗಿ ನನ್ನ ದೇವರು ದುಷ್ಟ ನಾರಾಯಣ, ದುಃಖಿ ನಾರಾಯಣ ಎಲ್ಲ ಜನಾಂಗಗಳಿಗೆ ಸೇರಿದ ದರಿದ್ರ ನಾರಾಯಣ – ಇವರೇ ನನ್ನ ಪೂಜೆಯ ವಸ್ತು.

''ಯಾರು ಉಚ್ಚವ್ಯಕ್ತಿಯಲ್ಲಿ, ನೀಚವ್ಯಕ್ತಿಯಲ್ಲಿ ಇದ್ದಾನೆಯೋ, ಸಂತನಲ್ಲಿ ಮತ್ತು ಪಾಪಿಯಲ್ಲಿ ಇದ್ದಾನೆಯೋ, ದೇವರಲ್ಲಿ ಮತ್ತು ಒಂದು ಕೀಟದಲ್ಲಿಯೂ ಇದ್ದಾನೆಯೋ ಅವನನ್ನು ಪೂಜಿಸು.

ಅವನು ಪ್ರತ್ಯಕ್ಷವಾಗಿ ಗೋಚರಿಸುವ ದೇವರು. ಉಳಿದೆಲ್ಲ ಮೂರ್ತಿಗಳನ್ನು ಮುರಿದು ಹಾಕಿರಿ.

''ಮೂರ್ಖರು, ಜಗತ್ತಿನಲ್ಲಿ ತುಂಬಿಕೊಂಡಿರುವ ಅವನ ಅನಂತ ಪ್ರತಿಬಿಂಬಗಳನ್ನು ಕಡೆಗಣಿಸಿ, ಕಾಲ್ಪನಿಕ ನೆರಳುಗಳನ್ನು ಹಿಂಬಾಲಿಸಿ ಧಾವಿಸುತ್ತಾರೆ. ಕಣ್ಣಿಗೆ ಕಾಣಿಸುವ ಏಕಮಾತ್ರ ದೇವರನ್ನು ಪೂಜಿಸೋಣ. ಉಳಿದೆಲ್ಲ ವಿಗ್ರಹಗಳನ್ನು ಮುರಿದು ಹಾಕಿರಿ.''

ಸ್ವಾಮೀಜಿ ಹಿಂದಿನ ಯಾವ ಪೂಜಾ ಪರಂಪರೆಯನ್ನೂ ಮುರಿದು ಹಾಕಲು ಬಂದವರಲ್ಲ. ಅವರ ಪ್ರಕಾರ ಧಾರ್ಮಿಕ ಜೀವನದ ಆರಂಭದ ಹಂತದಲ್ಲಿರುವವರು ವಿಗ್ರಹ ಪೂಜೆಯನ್ನು ಮಾಡಲಿ. ಆದರೆ ಮುಂದುವರಿದ ಸಾಧಕನಿಗೆ ಜೀವನಲ್ಲಿರುವ ಶಿವನ ಪೂಜೆ. ಆದ್ದರಿಂದ ಗುರುವಿನ ಪಾದಗಳನ್ನು ಪೂಜಿಸಬೇಕು ಎಂದು ಹೇಳಿದಾಗ ಸ್ವಾಮೀಜಿಯವರ ಪಾದಪೂಜೆ ಎಂಬ ಅರ್ಥಕ್ಕಿಂತ ಅವರ ಬೋಧನೆಗಳನ್ನು ನಾವು ಕಾರ್ಯರೂಪಕ್ಕೆ ತರಬೇಕು ಎಂದು ಅರ್ಥ. ಒಮ್ಮೆ ಅವರು ತಮಾಷೆಯಾಗಿ ಹೇಳುತ್ತಾರೆ, ''ನೀನು ನನ್ನೆದುರು ಒಂದು ದೀಪವನ್ನು ಬೆಳಗಿದರೆ ನಾನು ದೆವ್ವದಂತೆ ನಿನ್ನನ್ನು ಹಿಡಿದುಕೊಂಡು ನನ್ನ ಕೆಲಸವನ್ನು ಮಾಡುತ್ತೇನೆ.''



### ಮಂತ್ರಮೂಲಂ ಗುರೋರ್ವಾಕ್ಯಂ

''ಶ್ರೀರಾಮಕೃಷ್ಣರು ಆಡಿದ ಪ್ರತಿಯೊಂದು ಶಬ್ದವೂ ಮಂತ್ರ'' ಎನ್ನುತ್ತಾನೆ ಮಾಸ್ಟರ್ ಮಹಾಶಯ. ಶ್ರೀರಾಮಕೃಷ್ಣರ ನುಡಿಗಳ ಅತ್ಯುತ್ತಮ ಭಾಷ್ಯ, ವ್ಯಾಖ್ಯಾನ, ವಿವರಣೆ ಸ್ವಾಮೀಜಿ. ಅವರೇ ಒಂದೆಡೆ ಹೇಳಿದ್ದಾರೆ, ''ನಾನು ಬೋಧಿಸಹೊರಟ ವಿಚಾರಗಳೆಲ್ಲ ಶ್ರೀರಾಮಕೃಷ್ಣರ ನುಡಿಗಳನ್ನು ಪ್ರತಿಧ್ವನಿಸುವ ಒಂದು ಪ್ರಯತ್ನ ವಷ್ಟೆ.'' ಆದರೆ ಸ್ವಾಮೀಜಿ ಸಾಧನೆಯಿಂದ ಆ ಮಂತ್ರಗಳನ್ನು ಸಿದ್ಧ ಮಂತ್ರವಾಗಿಸಿದರು. ಆದ್ದರಿಂದ ಅವರ ಮಾತುಗಳಲ್ಲಿ ಪ್ರಚಂಡ ಶಕ್ತಿಯಿದೆ. ಅದನ್ನು ಆಲಿಸಿದವರಿಗೆ ಅವು ತಟ್ಟದಿರಲು ಸಾಧ್ಯವಿಲ್ಲ.

ಸ್ವಾಮಿ ತುರೀಯಾನಂದಜಿ ಹೇಳುತ್ತಾರೆ, ''ಸ್ವಾಮೀಜಿ ಮಾತುಗಳನ್ನು ಕೇಳಿದರೆ ಸಾಯುವ ವ್ಯಕ್ತಿಯೂ ಎದ್ದು ಕುಳಿತು, 'ಇರಿ, ಇರಿ, ನಾನು ಸಾಯುವ ಮೊದಲು ಸ್ವಾಮೀಜಿಯವರ ಮಾತುಗಳನ್ನು ಒಮ್ಮೆ ಕೇಳಬಯಸುತ್ತೇನೆ' ಎನ್ನುತ್ತಾನೆ. ಅವರ ಮಾತುಗಳು ಶ್ರೋತೃಗಳ ಹೃದಯಾಂತರಾಳವನ್ನು ಭೇದಿಸುತ್ತಿದ್ದವು. ಜನ ಅವನ್ನು ಕೇಳುತ್ತ ದೇಶ-ಕಾಲ, ತಮ್ಮ ಅಸ್ತಿತ್ವವನ್ನು ಮರೆಯುತ್ತಿದ್ದರು. ಸ್ವಾಮೀಜಿಯವರಿಗೆ ಜನರ ಮನಸ್ಸನ್ನು ಉನ್ನತ ಸ್ತರಕ್ಕೇರಿಸುವ ಶಕ್ತಿಯಿತ್ತು.

ಜೋಸೆಫಿನ್ ಮ್ಯಾಕ್ಲಿಯಾಡ್ ಸ್ವಾಮೀಜಿಯವರ ಧ್ವನಿಯನ್ನು ರೋಮೆ ರೋಲಾಗೆ ವಿವರಿಸುತ್ತಾಳೆ: ''ಅವರ ಧ್ವನಿ ಅತ್ಯಂತ ಸುಂದರವಾಗಿತ್ತು, ಗಂಭೀರವಾಗಿತ್ತು. ಅವರ ಧ್ವನಿಯಲ್ಲಿ ಕೋಣೆಯನ್ನೂ, ನಮ್ಮ ಹೃದಯಗಳನ್ನೂ ತುಂಬುವಂತಹ ಆಳವಾದ ಸ್ಪಂದನಗಳಿದ್ದವು. ಅವರು ತಮ್ಮ ಶ್ರೋತೃಗಳಿಗೆ ಆತ್ಮದ ಧ್ವನಿಯನ್ನು ಕೇಳುವಂತೆ ಮಾಡಬಲ್ಲವರಾಗಿದ್ದರು.'' ಅವರನ್ನು ಭೇಟಿಯಾದ ಎಮ್ಮಾ ಕಾಲ್ವೆ ಹೇಳುತ್ತಾಳೆ, ''ಅವರ ಮಾತು ಚೀನಾದ ಗಾಂಗ್‌ನ ಧ್ವನಿಯ ಹಾಗೆ.''

ಸ್ವಾಮೀಜಿಯವರೂ ಶ್ರೀರಾಮಕೃಷ್ಣರ ಹಾಗೆ ಬಹಳ ಕಡಿಮೆ ಜನರಿಗೆ ವಿಧಿವತ್ ಮಂತ್ರದೀಕ್ಷೆಯನ್ನು ನೀಡಿದ್ದರು. ಅವರು ಮಂತ್ರ ಬೋಧನೆಯಿಂದ ದೀಕ್ಷೆಯನ್ನು ನೀಡುವ ಸಾಮಾನ್ಯ ಗುರುವಾಗಿರಲಿಲ್ಲ. ಅವರು ಶಾಂಭವಿ ಹಾಗೂ ಶಕ್ತಿಮಾರ್ಗದಿಂದ ದೀಕ್ಷೆಯನ್ನು

ನೀಡಿದರು. ಗುರುವಿಗೆ ದೀಕ್ಷೆಯ ಮೂಲಕ ವ್ಯಕ್ತಿಯನ್ನು ಮಾಯೆಯ ಬಂಧನದಿಂದ ಪಾರುಗಾಣಿಸುವ ಸಾಮರ್ಥ್ಯವಿದೆ.

ಗುರು ನೀಡಿದ ಮಂತ್ರ ಮಾತ್ರವಲ್ಲ, ಗುರುವಿನ ವಾಕ್ಯವಾಕ್ಯವೂ ನಮ್ಮ ಪಾಲಿಗೆ ಮಂತ್ರವೇ. ಒಮ್ಮೆ ಸ್ವಾಮಿ ಶುದ್ಧಾನಂದಜಿಯವರನ್ನು ಒಬ್ಬರು ಪ್ರಶ್ನಿಸಿದರು, ''ದೀಕ್ಷೆಯನ್ನು ಕುರಿತಂತೆ ಸ್ವಾಮೀಜಿಯವರ ಅಭಿಪ್ರಾಯವೇನು?'' ಸ್ವಾಮಿ ಶುದ್ಧಾನಂದಜೀ ಉತ್ತರಿಸಿದರು, ''ಸ್ವಾಮೀಜಿ ದೀಕ್ಷೆಗೆ ಅಂತಹ ಪ್ರಾಮುಖ್ಯತೆಯನ್ನು ನೀಡಿರಲಿಲ್ಲ. ಅವರ ಗುರಿ ಸಂನ್ಯಾಸವಾಗಿತ್ತು. ಅವರು ಹೇಳುತ್ತಿದ್ದರು, ಸಾವಿರಾರು ಹುಡುಗರು ಬರಲಿದ್ದಾರೆ. ನಾನು ಅವರ ತಲೆಗಳನ್ನು ಬೋಳಿಸಲಿದ್ದೇನೆ. ಅವರ ತಾಯಿ ತಂದೆಯರು ಬಂದು ಅಳಲಿದ್ದಾರೆ. ನಾನು ಅದನ್ನು ನೋಡಬಯಸುತ್ತೇನೆ.''

ಸ್ವಾಮೀಜಿಯವರ '**ಸ್ವದೇಶ ಮಂತ್ರ**' ಆಧುನಿಕ ಭಾರತವನ್ನು ಬಡಿದೆಬ್ಬಿಸುವ ಮಹಾನ್ ಮಂತ್ರ. ಸ್ವಾಮೀಜಿಯಂತೆ ಭಾರತವನ್ನು ಪ್ರೀತಿಸಿದ ಇನ್ನೊಬ್ಬ ವ್ಯಕ್ತಿಯನ್ನು ನಾವು ಅರಿಯೆವು. '**ಸ್ವದೇಶ ಮಂತ್ರ**' ದೀಕ್ಷೆಯನ್ನು ನೀಡಿ ಸ್ವಾಮೀಜಿ ತಮ್ಮ ಶಿಷ್ಯರಿಗೆ ಪ್ರಾರ್ಥಿಸುವುದನ್ನು ಕಲಿಸಿಕೊಡುತ್ತಾರೆ, ''ಹಗಲು-ರಾತ್ರಿ ಪ್ರಾರ್ಥಿಸಿರಿ: ಹೇ ಗೌರೀಕಾಂತ, ನನ್ನನ್ನು ಮನುಷ್ಯನನ್ನಾಗಿ ಮಾಡು.''

ಗುರುವಿಗೆ ದಕ್ಷಿಣೆಯನ್ನು ನೀಡುವುದು ಸಂಪ್ರದಾಯ. ಸ್ವಾಮೀಜಿ ತಮ್ಮ ಶಿಷ್ಯರಿಂದ ಯಾವ ದಕ್ಷಿಣೆಯನ್ನು ಬಯಸಿದರು? ಅವರು ಹೇಳುತ್ತಾರೆ, ''ಭಾವಿಸಿ, ನನ್ನ ಮಕ್ಕಳೇ ಭಾವಿಸಿರಿ. ಬಡವರಿಗಾಗಿ, ಅಜ್ಞಾನಿಗಳಿಗಾಗಿ, ದಲಿತರಿಗಾಗಿ ನಿಮ್ಮ ನಾಡಿಮಿಡಿತ ನಿಂತು, ತಲೆತಿರುಗಿ, ನೀವು ಹುಚ್ಚರಾಗುವವರೆಗೆ ಭಾವಿಸಿರಿ. ಬಳಿಕ ನಿಮ್ಮ ಹೃದಯವನ್ನು ಅವನ ಪದತಲದಲ್ಲಿ ಎಸೆಯಿರಿ. ಆಗ ಶಕ್ತಿ, ಸಹಾಯ ಮತ್ತು ಅದಮ್ಯ ಸಾಮರ್ಥ್ಯ ಹೊರಹೊಮ್ಮುತ್ತದೆ... ನನ್ನ ಯುವ ಮಿತ್ರರೇ, ಬಡವರಿಗಾಗಿ, ದೀನರು-ಅಜ್ಞರಿಗಾಗಿನ ಈ ಅನುಕಂಪೆಯನ್ನು, ಹೋರಾಟವನ್ನು ನಾನು ನಿಮಗೆ ಬಿಟ್ಟು ಹೋಗುತ್ತೇನೆ.''

ಸ್ವಾಮೀಜಿ ಇಂದು ನಮ್ಮೊಂದಿಗೆ ಇಲ್ಲದಿದ್ದರೂ ಅವರ ಮಂತ್ರರೂಪದ ನುಡಿಗಳು ನಮಗೆ ನಿರಂತರ ಸ್ಫೂರ್ತಿ. ಅವರ ಜೀವಂತ ಸಾನ್ನಿಧ್ಯವು ಅವರ ಪತ್ರಗಳು, ಪ್ರವಚನಗಳು, ಮತ್ತು ಸಂಭಾಷಣೆಗಳ ರೂಪದಲ್ಲಿ ನಿರಂತರ ನಮ್ಮೊಂದಿಗಿದೆ. ೧೯೭೦ರಲ್ಲಿ ಭಾನುವಾರಗಳಂದು, ಹಾಲಿವುಡ್, ಅಥವಾ ಸಾಂತಾ ಬಾರ್ಬರಾದ ಕೇಂದ್ರಗಳಲ್ಲಿ ಕ್ರಿಸ್ಟೊಫರ್ ಇಶರ್‌ವುಡ್ ಸ್ವಾಮೀಜಿಯವರ ಪ್ರವಚನಗಳನ್ನು ಓದಿ ವಿವರಿಸುತ್ತಿದ್ದನು. ತನ್ನ ಈ ಅನುಭವವನ್ನು ಅವನು Vedanta: Voice of Freedom ಎಂಬ ಗ್ರಂಥದ ಮುನ್ನುಡಿಯಲ್ಲಿ ಹೀಗೆ ಬರೆದಿದ್ದಾನೆ: ''ಸ್ವಾಮೀಜಿಯವರ ನುಡಿಗಳ ಹಿಂದೆ ಅವರ ಜೀವಂತ ಉಪಸ್ಥಿತಿಯು ಮತ್ತೆ ಮತ್ತೆ ದೃಗ್ಗೋಚರವಾಗುತ್ತದೆ. ನಾನು ಅವರ ಮಾತುಗಳನ್ನು ಸಾರ್ವಜನಿಕರೆದುರು ಗಟ್ಟಿಯಾಗಿ ಓದುವಾಗ ನಾನು ಅವರ ಸಾನ್ನಿಧ್ಯವನ್ನು ವಾಚಕರೊಂದಿಗೆ ಹಂಚಿಕೊಳ್ಳುತ್ತಿದ್ದೇನೆ ಎಂದು ನನಗೆ ಅನ್ನಿಸುತ್ತದೆ. ನೀವು ಸ್ವಾಮೀಜಿಯವರನ್ನು ಓದಿದರೆ, ಬಹುಶಃ ನಿಮಗೂ ಅದೇ ಅನುಭವವಾಗುತ್ತದೆ.''

### ಮೋಕ್ಷಮೂಲಂ ಗುರುಕೃಪಾ

ಸಾಮಾನ್ಯವಾಗಿ, ಕೃಪೆ ನಾಲ್ಕು ಬಗೆಯದಾಗಿರುತ್ತದೆ - ಆತ್ಮಕೃಪೆ, ಶಾಸ್ತ್ರಕೃಪೆ, ಗುರುಕೃಪೆ ಮತ್ತು ಭಗವತ್ಕೃಪೆ. ಸಾಧಕನ ಸ್ವಪ್ರಯತ್ನವೇ **ಆತ್ಮಕೃಪೆ.** ಸಾಧಕನ ಶ್ರದ್ಧೆ, ಸ್ವಪ್ರಯತ್ನ ಮತ್ತು ಪ್ರೇಮದಿಂದ ಶಾಸ್ತ್ರಗಳ ಸಾರವು ಅವನಿಗೆ ದೃಗ್ಗೋಚರವಾದಾಗ ಅದು **ಶಾಸ್ತ್ರಕೃಪೆ.** ಶಿಷ್ಯನ ಭಕ್ತಿ ಮತ್ತು ಸೇವೆಯಿಂದ ಸಂಪ್ರೀತನಾದ ಗುರು ಜ್ಞಾನವನ್ನು ಉಪದೇಶಿಸುವುದನ್ನು **ಗುರುಕೃಪೆ** ಎನ್ನಲಾಗಿದೆ. ಆತ್ಮಕೃಪೆಯಿಂದ ಮಾತ್ರ ವ್ಯಕ್ತಿ **ಭಗವತ್ಕೃಪೆ**ಗೆ ಪಾತ್ರನಾಗುತ್ತಾನೆ. ಭಗವಂತ ಮತ್ತು ಗುರು ನಮ್ಮ ಮೇಲೆ ಕೃಪೆಮಾಡಲು ಸದಾ ಸಿದ್ಧರಾಗಿರುತ್ತಾರೆ.

ಹೆಚ್ಚಿನ ಜನ ಆಲಸಿಗಳಾಗಿ ಕುಳಿತುಕೊಂಡು ಕೃಪೆಗಾಗಿ ಕಾಯುತ್ತಿರುತ್ತಾರೆ. ಆದರೆ ಕೃಪೆ ಮರದಿಂದ ಉರುಳಿ ಬೀಳುವಂಥದಲ್ಲ. ಸ್ವಾಮೀಜಿ ತಮ್ಮ ಒಬ್ಬ ಶಿಷ್ಯನಿಗೆ ಹೇಳಿದರು, ''ಯಾರ ದೇಹ, ಮನ, ಮಾತು ಪವಿತ್ರವಾಗಿದೆಯೋ, ಯಾರಲ್ಲಿ ನಿತ್ಯ-ಅನಿತ್ಯ ವಸ್ತು ವಿವೇಕ ಜ್ಞಾನವಿದೆಯೋ, ಊರ್ಜಿತ ಭಕ್ತಿ ಇದೆಯೋ, ಯಾರು ಧ್ಯಾನಶೀಲನಾಗಿದ್ದಾನೆಯೋ ಅವನಿಗೆ ಭಗವತ್ಕೃಪೆಯಾಗುತ್ತದೆ.''

ಸ್ವಾಮೀಜಿ ಸದ್ಗುರುವಾಗಿದ್ದರು, ಸಿದ್ಧಗುರುವಾಗಿದ್ದರು. ಸ್ವಾಮೀಜಿಯವರ ಗುರುಭಾವ ದರ್ಶನೀಯವಾಗಿತ್ತು. ಒಂದು ದಿನ ಅವರು ಸ್ವಾಮಿ ಸ್ವರೂಪಾನಂದರಿಗೆ ಹೇಳಿದರು, ''ನೋಡು, ಸ್ವರೂಪ್, ನಾನು ಯಾರ ತಲೆಯ ಮೇಲೆ ಕೈ ಇಟ್ಟಿದ್ದೇನೆಯೋ ಅವರು ಚಿಂತಿಸಬೇಕಾಗಿಲ್ಲ.'' ಇನ್ನೊಮ್ಮೆ ಸ್ವಾಮೀಜಿ, ''ನನ್ನ ಶಿಷ್ಯರು ಸಾವಿರ ಸಲ ನರಕಕ್ಕೆ ಹೋದರೆ, ನಾನು ಅವರನ್ನು ಸಾವಿರ ಸಲ ನರಕದಿಂದ ಮೇಲೆತ್ತುತ್ತೇನೆ. ಇದು ಸತ್ಯವಲ್ಲದಿದ್ದರೆ ಶ್ರೀರಾಮಕೃಷ್ಣರೂ ಸತ್ಯವಲ್ಲ.''

ಸ್ವಾಮೀಜಿಯವರ ಗುರುಶಕ್ತಿಯನ್ನು ಕಂಡು ಅವರ ಶಿಷ್ಯರು ಬೆರಗಾಗಿದ್ದರು. ಸ್ವಾಮೀಜಿಯವರ ದೈವೀಶಕ್ತಿ ಅವರ ಶಿಷ್ಯರೊಳಗೆ ಹರಿದು ಅವರನ್ನು ಮಹಾತ್ಮರನ್ನಾಗಿಸಿತು. ಸ್ವಾಮೀಜಿಯವರ ಶಕ್ತಿ ಅವರ ಶಿಷ್ಯರಿಗಷ್ಟೇ ಸೀಮಿತವಾಯಿತೇ? ಇಲ್ಲ, ಅದು ಸಾಧ್ಯವಿಲ್ಲ. ಸ್ವಾಮೀಜಿಯವರದು ದೇಶಕಾಲಾತೀತ ವ್ಯಕ್ತಿತ್ವ. ಆದ್ದರಿಂದ ವಿಶ್ವದಾದ್ಯಂತ ಎಲ್ಲೆಡೆ ಎಲ್ಲರೂ ಅವರ ವಿಚಾರ, ಚಿಂತನೆ-ಬೋಧನೆಗಳಿಂದ ಪ್ರಭಾವಿತರಾಗಿ ತಮ್ಮ ಜೀವನವನ್ನು ರೂಪಿಸಿಕೊಂಡಿದ್ದಾರೆ, ರೂಪಿಸಿಕೊಳ್ಳುತ್ತಿದ್ದಾರೆ. *'ನೌಮಿ ಗುರುವಿವೇಕಾನಂದಂ..'*

**ಯಾವ ಜನಾಂಗ ಮತ್ತು ದೇಶ ನಾರಿಯನ್ನು ಗೌರವ ದೃಷ್ಟಿಯಿಂದ ನೋಡುವುದಿಲ್ಲವೋ ಆ ದೇಶ ಶ್ರೇಷ್ಠವಾಗಿಲ್ಲ, ಮತ್ತು ಮುಂದೆ ಆಗುವಂತೆಯೂ ಇಲ್ಲ. ಯಾರು ದೇವರನ್ನು ವಿಶ್ವದಲ್ಲಿ ಸರ್ವವ್ಯಾಪಿಯಾದ ಶಕ್ತಿ ಎಂದು ತಿಳಿದು, ಆ ಮಹಾಶಕ್ತಿಯ ಸರ್ವಭಾವನೆಯನ್ನು ಸ್ತ್ರೀಯರಲ್ಲಿ ನೋಡುತ್ತಾರೋ ಅವರೇ ನಿಜವಾದ ಶಕ್ತಿ ಪೂಜಕರು.**

*- ಸ್ವಾಮಿ ವಿವೇಕಾನಂದ*

# ಅಧ್ಯಯನ ಮತ್ತು ಕ್ರಿಯಾಶೀಲತೆ

## ಒಂದು ಚಿಂತನೆ

ಸರಗೂರು ರಮೇಶ್

ನಿರಂತರ ಹೊಸದನ್ನು ಕಲಿಯುವ, ಸೃಷ್ಟಿಸುವ ಜಾಯಮಾನ ಮನಸ್ಸಿನದು. ಅದರ ಚಲನಶೀಲ ಪ್ರವೃತ್ತಿಯನ್ನು ಶಿಕ್ಷಣದಲ್ಲಿ ಸಮರ್ಥವಾಗಿ ಬಳಸಿಕೊಳ್ಳುವುದೂ ಒಂದು ಕಲೆ; ಉಪಯುಕ್ತವಾದ ಒಂದು ವಿಧಾನ. ಅಧ್ಯಾಪಕ, ವಿದ್ಯಾರ್ಥಿ – ಇಬ್ಬರೂ ರೂಢಿಸಿಕೊಳ್ಳಬೇಕಾದ ಈ ಸ್ವಭಾವವನ್ನು ಕುರಿತು ಇಲ್ಲಿ ಚಿಂತಿಸುವ ಲೇಖಕರು ಉತ್ತಮ ವಾಗ್ಮಿಗಳು ಹಾಗೂ ಲೇಖಕರು. ಪ್ರಸ್ತುತ ಅವರು ಮೈಸೂರು ಶ್ರೀರಾಮಕೃಷ್ಣ ವಿದ್ಯಾಶಾಲೆಯಲ್ಲಿ ಅಧ್ಯಾಪಕರಾಗಿದ್ದಾರೆ.

**ಜ್ಞಾ**ನವನ್ನು ಬೆಳೆಸಿಕೊಳ್ಳಲು ಹಂಬಲಿಸುವವರಿಗೆ ಅಧ್ಯಯನ ಮತ್ತು ನಿರಂತರ ಚಿಂತನೆಯು ಅನಿವಾರ್ಯ ಮತ್ತು ಅತ್ಯಗತ್ಯ. ಅದರೆ ಈ ಬಗೆಯ ಅಧ್ಯಯನವು ಯಾಂತ್ರಿಕವಾಗಿ ನಿಷ್ಫಲವಾಗದಂತೆ ನೋಡಿಕೊಳ್ಳಬೇಕು. ಓದು ಒಂದು ಜೀವಂತ ಕ್ರಿಯೆಯಾಗಿ ಮನಸ್ಸನ್ನು ಅರಳಿಸಬೇಕು, ವಿಕಾಸಗೊಳಿಸಬೇಕು. ಅಂತಹ ಅಧ್ಯಯನದಲ್ಲಿ ಅರ್ಥಮಾಡಿಕೊಳ್ಳುವುದು, ತಿಳಿದುಕೊಂಡದ್ದನ್ನು ಅರಗಿಸಿಕೊಳ್ಳುವುದು, ಅದು ಸರಾಗವಾಗಿ ನೆನಪಿನ ಶಕ್ತಿಯ ಭಾಗವಾಗುವಂತೆ ನೋಡಿಕೊಳ್ಳುವುದು, ಆಳಕ್ಕೆ ಇಳಿದದ್ದು ಸರಾಗವಾಗಿ ನೆನಪಿನ ಮೇಲ್ಭಾಗದ ಮನಸ್ಸಿಗೆ ಬರುವಂತೆ ಅಭ್ಯಾಸ ನಡೆಸುವುದು, ಅರಿತುಕೊಂಡದ್ದನ್ನು ಸಮರ್ಥವಾದ ಭಾಷೆಯಲ್ಲಿ ಅಭಿವ್ಯಕ್ತಗೊಳಿಸುವುದು ಮುಂತಾದ ಅಂಶಗಳು ಅಳವಡುತ್ತವೆ.

ನಮ್ಮ ಅಧ್ಯಯನವು ಯಾವಾಗ ಪರಿಣಾಮಕಾರಿಯೂ, ಕ್ರಿಯಾಶೀಲವೂ ಆಗುತ್ತದೆ ಎಂಬ ಪ್ರಶ್ನೆ ನಮ್ಮನ್ನು ಕಾಡುವುದು ಸಹಜ. 'ಮಾನವನ ಅಂತರಾಳದಲ್ಲಿ ಜ್ಞಾನ, ಶಕ್ತಿ, ಸಾಮರ್ಥ್ಯಗಳು ಈಗಾಗಲೇ ಇವೆ, ಆದರೆ ಅವು ನಿದ್ರಾವಸ್ಥೆಯಲ್ಲಿವೆ' ಎಂದು ಸ್ವಾಮಿ ವಿವೇಕಾನಂದರು ತಿಳಿಸುತ್ತಾರೆ. ಆದ್ದರಿಂದ ನಮ್ಮಲ್ಲಿರುವ ಸಾಮರ್ಥ್ಯವನ್ನೇ ಸಮರ್ಪಕವಾದ ಅಭ್ಯಾಸ ಮತ್ತು ಅಧ್ಯಯನದಿಂದ ನಾವು ಬೆಳೆಸಿಕೊಳ್ಳುತ್ತಿದ್ದೇವೆ ಎಂಬ ಅರಿವನ್ನು ಹೊಂದಿರುವುದು ಅತ್ಯಗತ್ಯ. ಇಂದು ನನಗೆ ಕಷ್ಟವೆನಿಸಿದ್ದು, ಅಸಾಧ್ಯವೆನಿಸಿದ್ದು ಕಾಲಕ್ರಮೇಣ ಸುಲಭವೂ ಸಾಧ್ಯವೂ ಆಗುತ್ತದೆ ಎಂಬ ಭರವಸೆಯು ಮನಸ್ಸು, ಹೃದಯಗಳಲ್ಲಿ ಬೇರೂರಿರಬೇಕು. ಅಭ್ಯಾಸ ಮಾಡುತ್ತಾ ನಡೆದಂತೆ ದೃಢವಾದ ಆತ್ಮವಿಶ್ವಾಸವು ನಮ್ಮಲ್ಲಿಯೇ ಬೆಳೆಯುವುದನ್ನು ನಾವು ಅನುಭವಿಸಬಹುದು. ನಿರಾಸಕ್ತಿ, ಮಂಕು, ಬೇಸರ, ಆಲಸ್ಯವು ನಮ್ಮನ್ನು ಆಕ್ರಮಿಸಿದ್ದರೆ ಅವುಗಳ ಮೂಲಕಾರಣವನ್ನು ಕಂಡುಕೊಳ್ಳುವುದು ಮುಖ್ಯವಾಗುತ್ತದೆ. ಶಾರೀರಿಕ ಬಳಲಿಕೆ, ನಮ್ಮ ಸುತ್ತಮುತ್ತಲಿನ ಮಾಧ್ಯಮಗಳ ಮನರಂಜನೆ ನಮಗೆ ತಿಳಿಯದಂತೆ ನಮ್ಮ ಮನಸ್ಸಿಗೆ ನುಗ್ಗಿ ಇಚ್ಛಾಶಕ್ತಿಯನ್ನು ಮಂದಗೊಳಿಸುತ್ತದೆ. ಅದಕ್ಕೆ ವಿರುದ್ಧವಾಗಿ ನಿಯಮಿತವಾದ ವ್ಯಾಯಾಮ, ನಮಗಿಷ್ಟವಾದ ಕ್ರೀಡೆಗಳಲ್ಲಿ ಪಾಲ್ಗೊಳ್ಳುವುದು, ಉತ್ತಮ ಸಂಗೀತವನ್ನು ಕೇಳುತ್ತಾ ಅಭಿರುಚಿ ಬೆಳೆಸಿಕೊಳ್ಳುವುದು ಮನಸ್ಸಿಗೆ ಮುದ ನೀಡುತ್ತದೆ. ಆನಂದದಿಂದ ನಮ್ಮನ್ನು ತೊಡಗಿಸಿಕೊಳ್ಳುವ ಅಭ್ಯಾಸವಾದರೆ, ಅಧ್ಯಯನವು ಆನಂದದಾಯಕವಾಗುವುದರಲ್ಲಿ ಸಂಶಯವಿಲ್ಲ.

ಮಾನವ ಜೀವನದ ಅಥವಾ ಅಸ್ತಿತ್ವದ ವಿಶೇಷವೇನೆಂದರೆ ನಮ್ಮಲ್ಲಿರುವ ದೈಹಿಕ ಉಪಕರಣಗಳು ಬೆಳೆದು, ವಿಕಾಸ ಹೊಂದಬಲ್ಲವು ಎಂಬುದು. ಅಂದರೆ ದೇಹವು ಆರೋಗ್ಯವೂ ಬಲಾಢ್ಯವೂ ಆಗಬಲ್ಲದು; ಇಂದ್ರಿಯಗಳು ತೀಕ್ಷ್ಣವಾಗಿ ಹೆಚ್ಚಿನ ಪಟುತ್ವ ಹೊಂದಬಲ್ಲವು; ಪ್ರಾಣವು ಸಮತೋಲನಗೊಂಡು ಶರೀರದ ಸೌಖ್ಯವನ್ನು ಹೆಚ್ಚಿಸಬಲ್ಲದು; ಕಲ್ಮಶಗಳನ್ನು ಕಳೆದುಕೊಂಡು ನಮ್ಮ ಮನಸ್ಸು ರಬ್ಬರ್‌ನಂತೆ ವಿಸ್ತಾರವಾಗಬಲ್ಲದು; ಬೌದ್ಧಿಕ ಸಾಮರ್ಥ್ಯವು ತೀಕ್ಷ್ಣವಾಗಿ, ಅರಿಯುವ ಶಕ್ತಿಯು ಬೆಳೆಯಬಲ್ಲದು. ಇಚ್ಛಾಶಕ್ತಿಯು ನರಮಂಡಲವನ್ನು ವ್ಯಾಪಿಸಿ ಅಗಾಧವಾಗಿ ಜೀವನ ಸಂದರ್ಭಗಳನ್ನು ನಿಯಂತ್ರಿಸಬಲ್ಲದು. ಅಂದರೆ ಮಾನವರಾದ ನಾವು ಪ್ರಾಣಿಗಳಂತೆ ನೈಸರ್ಗಿಕ ರಚನೆಯ ಕಟ್ಟುಪಾಡಿನ ಚೌಕಟ್ಟಿನೊಳಗೆ ಬಿಗಿಯಲ್ಪಟ್ಟಿಲ್ಲ; ಒಳಗಿರುವ ಅಂತಃಕರಣದ ಎಲ್ಲಾ ಅಂಶಗಳನ್ನು ಹಿಗ್ಗಿಸಿ ವಿಶಾಲಗೊಳಿಸಬಲ್ಲವರಾಗಿದ್ದೇವೆ. ಇದನ್ನು Law of self-development ಎಂದು ಕರೆಯುತ್ತಾರೆ. ಇಂತಹ ಸೌಲಭ್ಯವನ್ನು ತನ್ನಲ್ಲಿಯೇ ಹೊಂದಿರುವ ವಿಶಿಷ್ಟ ಜೀವಿಯಾಗಿದ್ದಾನೆ ಮಾನವ. ಇದಕ್ಕೆ ಕಾರಣವೇನೆಂದರೆ, ಸ್ವಾಮಿ ವಿವೇಕಾನಂದರು ತಿಳಿಸುವಂತೆ ಮನುಷ್ಯನು ಕೇವಲ ಮಾನವ ಪ್ರಕೃತಿಗೆ ಬದ್ಧವಾಗಿ, ಸೀಮಿತವಾಗಿರದೆ ಹಿಂದಿನ ಪ್ರಾಣಿ ಮತ್ತು ಮುಂದೆ ವಿಕಾಸಗೊಂಡು ಸಿದ್ದಿಸಬೇಕಾದ ದೈವಿಕ ಪ್ರಕೃತಿಯ ಸಂಗಮಸ್ಥಾನವಾಗಿದ್ದಾನೆ. ತನ್ನ ಪ್ರಕೃತಿಯ ವ್ಯವಸ್ಥೆಯನ್ನು ಶುದ್ಧಗೊಳಿಸಿ ಪ್ರತಿಯೊಂದು ಅಂಶವನ್ನು ಬೆಳೆಸಿಕೊಂಡು ಆನಂದಿಸುವ ಜೀವಚೈತನ್ಯವಾಗಿದ್ದಾನೆ ಮಾನವ. ಇದನ್ನೇ soul ಎಂದು ಸ್ವಾಮೀಜಿಯವರು ಸಂಬೋಧಿಸುವುದು. ನಾವು ಶಿಕ್ಷಣ ಪಡೆಯುವಾಗ ಈ ಮುಖ್ಯವಾದ ಅಸ್ತಿತ್ವದ ಒಳನೋಟವನ್ನು ಹೊಂದಿರಬೇಕಾದ ಅಗತ್ಯವಿದೆ. ಏಕೆಂದರೆ ಜೀವನ ಆಂತರ್ಯದಲ್ಲಿರುವ ಪ್ರಕೃತಿಯ ಗತಿಯೇ ಅಥವಾ ಗುರಿಯೇ ನಮ್ಮೆಲ್ಲರ ಶಿಕ್ಷಣ ಮತ್ತು ಅಧ್ಯಯನದ ಗುರಿಯೂ ಆದಾಗ ಕಲಿಯುವಿಕೆ ಮತ್ತು ಓದು ಪರಿಣಾಮಕಾರಿಯಾಗುತ್ತದೆ, ಸಫಲವಾಗುತ್ತದೆ; ಕ್ರಿಯಾಶೀಲವಾಗುತ್ತದೆ. ಆಗಲೇ ನಾವು ಯಂತ್ರಮಾನವನಂತೆ ಸಿದ್ಧಮಾದರಿಯಾಗದೆ ನಿಜವಾದ ಅರ್ಥದಲ್ಲಿ ಕ್ರಿಯಾಶೀಲ ಅಥವಾ creative ಆಗುವುದು. ಈ ಹಿನ್ನೆಲೆಯಲ್ಲಿಯೇ ನಾವು ಸ್ವಾಮಿ ವಿವೇಕಾನಂದರ ಅರ್ಥಪೂರ್ಣ ಹೇಳಿಕೆಯನ್ನು ಗ್ರಹಿಸಬೇಕು. ಅವರು ಹೇಳುತ್ತಾರೆ: ''Books are useless to us until our own book opens.'' *(ನಮ್ಮದೇ ಆದ ಪುಸ್ತಕ ತೆರೆಯುವವರೆಗೆ ಬೇರೆ ಪುಸ್ತಕಗಳೆಲ್ಲ ನಿರುಪಯುಕ್ತ.)*

ಓದಿದ್ದು, ಕಲಿತದ್ದು ಮನಸ್ಸಿನಲ್ಲಿ ಘನೀಕೃತವಾಗಬೇಕು; ನಮ್ಮ ಅಭ್ಯಾಸ ಮತ್ತು ಕೆಲಸಗಳಲ್ಲಿ ಯಾವುದಾದರೊಂದು ರೀತಿಯಲ್ಲಿ ಅದು ಅಭಿವ್ಯಕ್ತಗೊಳ್ಳಬೇಕು ಮತ್ತು ಅನುಷ್ಠಾನಗೊಳ್ಳಬೇಕು. ಆಗಲೇ ಅದನ್ನು ಕ್ರಿಯಾಶೀಲ ಅಧ್ಯಯನವೆನ್ನುವುದು. ಇಲ್ಲದೇ ಹೋದರೆ ನಾವು ಕಲಿತ, ಓದಿದ ಎಷ್ಟೋ ಸಂಗತಿಗಳು ಮೋಡಗಳಂತೆ ಚೆದುರಿ ಅದೃಶ್ಯವಾಗುತ್ತವೆ. ಆದರೆ ಅವು ಹರಳುಗಟ್ಟಿದ ಚಿಂತನೆಯಾದರೆ ನಿರ್ದಿಷ್ಟವಾದ, ವ್ಯವಸ್ಥಿತವಾದ ಮತ್ತು ಸ್ಪಷ್ಟವಾದ ದೃಷ್ಟಿಯು ಮೂಡಿ ಬರಲಾರಂಭಿಸುತ್ತದೆ. ಇದಕ್ಕೆ ನಮಗೆ ಕೆಲಸ ಅಥವಾ ಚಟುವಟಿಕೆಯು ನೆರವಾಗುತ್ತದೆ. ಅಂದರೆ ತಿಳಿದದ್ದನ್ನು ಕಾರ್ಯೋನ್ಮುಖವಾಗಿ ವ್ಯಕ್ತಪಡಿಸಿದಾಗ ನಾವು ''ಜ್ಞಾನವಾಹಕ''ವಾಗಿ ಮಾರ್ಪಡುತ್ತೇವೆ. ಮೆದುಳಿನ ಸಾಮರ್ಥ್ಯವು ಬಲಗೊಳ್ಳುವುದು ಆಗಲೇ. ಚಿಂತನೆ ಅಥವಾ ಶಬ್ದಗಳಾಚೆ ಹೋಗಿ ಮೂಲತತ್ತ್ವವನ್ನು ಅನ್ವೇಷಿಸುವ ಅಭ್ಯಾಸವನ್ನು ನಾವು ಬೆಳೆಸಿಕೊಳ್ಳಬೇಕು. ಆಗ ಎಂತಹಾ ವಿಷಯದಲ್ಲೂ ಕೂಡಾ ಆಸಕ್ತಿ ಅರಳುತ್ತದೆ. ಯಾವ ಕಾಣ್ಕೆಯಿಂದ, ಯಾವ ದೃಷ್ಟಿಕೋನದಿಂದ ಒಬ್ಬ ಲೇಖಕನ ಚಿಂತನೆ ಅಥವಾ ನಿಯಮ ಅಥವಾ ಸಿದ್ಧಾಂತವು ಹೊರಹೊಮ್ಮಿದೆ ಎಂದು ಕಂಡುಕೊಳ್ಳುವ ಪ್ರಯತ್ನವು ಅರಿವಿನ ದಿಗಂತವನ್ನು ವಿಸ್ತರಿಸುತ್ತದೆ; ಅಧ್ಯಯನವನ್ನು ಆಸಕ್ತಿಪೂರ್ಣವಾಗಿಸುತ್ತದೆ.

''ಹೊರಗಿನಿಂದ ತುಂಬಿಸುವುದು'' ಪರಿಣಾಮಕಾರಿಯಲ್ಲ; ''ಒಳಗಿನಿಂದ ಹೊರಹೊಮ್ಮಿಸುವುದು'' ಅಥವಾ ''ಆಂತರ್ಯದಿಂದ ವಿಕಸಿಸುವುದು'' ಪರಿಣಾಮಕಾರಿ ಮತ್ತು ಕ್ರಿಯಾಶೀಲ. ನಮ್ಮ ಸಾಮಾಜಿಕ ಮತ್ತು ಶೈಕ್ಷಣಿಕ ಪರಿಸರದಲ್ಲಿ ಈ ಪ್ರಕ್ರಿಯೆಗೆ ಬಹುಜನರ ಮನ್ನಣೆ, ಪ್ರಶಂಸೆ ಇಲ್ಲವಾದರೂ ಇದು ಅತ್ಯಂತ ಪ್ರಬಲವೂ ಪರಿಣಾಮಕಾರಿಯೂ ಆದ ಕ್ರಮ ಅಥವಾ ವಿಧಾನ. ಆರಂಭದಲ್ಲಿ ನಾವು ನಿಧಾನವಾಗಿ ಮಂದಗತಿಯಲ್ಲಿ ಸಾಗಬಹುದು. ಆದರೆ ಕ್ರಮೇಣ ನಮ್ಮಲ್ಲಿ ಪ್ರತಿಯೊಂದು ವಿಷಯವನ್ನೂ ಅಂತರಂಗದ ಬೆಳಕಿನಲ್ಲಿಟ್ಟು ನೋಡುವ ಅಭ್ಯಾಸವು ರೂಢಿಗತವಾಗುತ್ತದೆ. ಸಮರ್ಥವಾದ ಬುದ್ಧಿಯ ಒರೆಗೆ ಹಚ್ಚಿ , ತಿಕ್ಕಿ ನೋಡಿ, ಜೊಳ್ಳನ್ನು ತಿರಸ್ಕರಿಸಿ ಸಾರವನ್ನು ಮಾತ್ರ ಸ್ವೀಕರಿಸುವ ''ವಿವೇಚನಾಶಕ್ತಿ'' ಬೆಳೆಯುವುದು ಈ ವಿಧಾನದಿಂದಲೇ. ಆಗಲೇ ನಾವು ವಿಶಿಷ್ಟವಾದ ಸ್ವಭಾವ ಮತ್ತು ಸ್ವಧರ್ಮವನ್ನು ಪ್ರಕಟಪಡಿಸುವ ಪ್ರಜ್ಞೆ ಅಥವಾ ಚೈತನ್ಯವಾಗಿ ರೂಪಾಂತರಗೊಳ್ಳುವುದು.

ಕಲಿಯುವ ಹಸಿವು, ತಿಳಿಯುವ ಹಂಬಲ, ಅರಿಯುವ ಆಸಕ್ತಿ, ಹೇಗೆ? ಯಾಕೆ? ಎಂಬ ಕುತೂಹಲವನ್ನು ಜೀವಂತವಾಗಿಟ್ಟುಕೊಳ್ಳಬೇಕು. ಆಗ ವರ್ತಮಾನದಲ್ಲಿ ಎಚ್ಚರದಿಂದಿರುವುದು ಸಾಧ್ಯವಾಗುತ್ತದೆ. ನಮ್ಮ ಮನಸ್ಸಿನಲ್ಲಿ ಮೂಡುವ ಅಭಿಪ್ರಾಯಗಳು ಅಥವಾ ಯಾವುದೇ ವ್ಯಕ್ತಿ, ಸಂದರ್ಭಗಳನ್ನು ಕುರಿತಂತೆ ನಾವು ತೆಗೆದುಕೊಳ್ಳುವ ತೀರ್ಮಾನಗಳು ಅಂತಿಮ ಸತ್ಯವಾಗಿವೆ ಎಂಬ ಭ್ರಮೆಗೆ ಬಲಿಯಾಗಬಾರದು, ಸಾಮಾನ್ಯವಾಗಿ ಮಾನವ ಬುದ್ಧಿ ಈ ದೌರ್ಬಲ್ಯಕ್ಕೆ ಒಳಗಾಗುತ್ತದೆ. ಈ ಚಟದಿಂದಲೇ ಮನಸ್ಸು ತನ್ನ ತಾಜಾತನವನ್ನು ಕಳೆದುಕೊಂಡು, ಹಳಸಲಾಗಿ ಜೀವನವು ಬೇಸರ ಎನಿಸತೊಡಗುತ್ತದೆ. ಈ ಬೇಸರ ಅಥವಾ ನಿರಾಸಕ್ತಿಗಳ ಮೇಲೆ ಯುದ್ಧ ಸಾರಿ, ನಲಿವು ಮತ್ತು ತನ್ಮಯತೆಯ ವಿಜಯಧ್ವಜವನ್ನು ನೆಡುವಷ್ಟು ಅಧ್ಯಯನವು ಕ್ರಿಯಾಶೀಲವಾಗಿರಬೇಕು. ಎಲ್ಲವನ್ನು ನಾನೇ ತಿಳಿಯಬೇಕೆಂಬ ಹಟಕ್ಕಿಂತ ನನಗೆ ತಿಳಿಯದ್ದನ್ನು ಚೆನ್ನಾಗಿ ತಿಳಿದವರ ಬಳಿ ಕಲಿಯುವ ಮತ್ತು ಅವರ ಮಾತಿಗೆ ಕಿವಿಗೊಡುವ ''ನಮ್ರತೆ'' ವಿದ್ಯಾಭ್ಯಾಸಕ್ಕೆ ಉತ್ತಮವಾದ ಸಂಗಾತಿ. ಸ್ವಾಮಿ ವಿವೇಕಾನಂದರ ಔಚಿತ್ಯಪೂರ್ಣವಾದ ಈ ಮಾತನ್ನು ನಾವು ನೆನಪಿಡಬೇಕು: ''ನಿಮ್ಮೊಳಗಿರುವುದನ್ನು ಪ್ರಯತ್ನಪೂರ್ವಕವಾಗಿ ಹೊರಹೊಮ್ಮಿಸಿ. ಆದರೆ ಅನುಕರಿಸಬೇಡಿ. ಇತರರಿಂದ ಒಳ್ಳೆಯದೆಲ್ಲವನ್ನೂ ಸ್ವೀಕರಿಸಿ.''

ಮಾನವರಾದ ನಮ್ಮಲ್ಲಿ ಬುದ್ಧಿಗಿಂತಲೂ ಭಾವನೆಯು ಹೆಚ್ಚು ಪ್ರಬಲವಾದ ಶಕ್ತಿಯಾಗಿದೆ. ನಿರಂತರವಾಗಿ ಭಾವೋದ್ವೇಗಕ್ಕೆ ಒಳಗಾಗುವ ರೂಢಿಯಾಗಿಬಿಟ್ಟರೆ ದಿನದಿಂದ ದಿನಕ್ಕೆ ಶಕ್ತಿ, ಸಾಮರ್ಥ್ಯಗಳನ್ನು ಕಳೆದುಕೊಳ್ಳುತ್ತಾ ದುರ್ಬಲರಾಗಿಬಿಡುತ್ತೇವೆ. ಓದುತ್ತೇವೆ, ಬರೆಯುತ್ತೇವೆ. ಆದರೆ ಯಾವುದೂ ಒಳಗೆ ಗಟ್ಟಿಯಾಗಿ ನಿಲ್ಲುವುದಿಲ್ಲ. ಚಿಂತನೆಯಿಲ್ಲದೆ, ವಿವೇಚನೆಯಿಲ್ಲದೆ ಮತ್ತು ನಿಯಂತ್ರಣವಿಲ್ಲದೆ ಪ್ರತಿಕ್ರಿಯಿಸುತ್ತಾ ಹೋಗುವುದರಿಂದ ನಮ್ಮ ವ್ಯಕ್ತಿತ್ವವು ಸಮಗ್ರತೆಯನ್ನು ಕಳೆದು ಕೊಳ್ಳುತ್ತವೆ. ಮೇಲಿನ ವಿವೇಕಬುದ್ಧಿಯಿಂದ ಕೆಳಗಿನ ಭಾವನೆಗಳ, ತೀಕ್ಷ್ಣ ಪ್ರತಿಕ್ರಿಯೆಗಳ ಹರಿವನ್ನು ಸಂಯಮಿಸಿ ನಿಯಂತ್ರಿಸಬೇಕು: ಭಾವನಾ ಭೂಮಿಕೆಯಲ್ಲಿ ಕಳೆಗಳನ್ನು ಕಿತ್ತು, ಹದಗೊಳಿಸಬೇಕು. ಇದೊಂದು ಕೃಷಿ; ಅಂತಃಕರಣದಲ್ಲಿ ಇದೊಂದು ವ್ಯವಸಾಯ, ಭಗವದ್ಗೀತೆಯು ಈ ವಿವೇಚನಾ ಶಕ್ತಿಗೆ ''**ವ್ಯವಸಾಯಾತ್ಮಿಕಾ ಬುದ್ಧಿ**'' ಎಂಬ ಮಾತನ್ನೇ ಪ್ರಯೋಗಿಸಿದೆ. ವ್ಯಕ್ತಿತ್ವವನ್ನು ನಿರ್ಮಾಣ ಮಾಡುವ ಈ ಪ್ರಕ್ರಿಯೆಗೆ ಪುಷ್ಟಿ ನೀಡುವ ಸ್ವಾಮಿ ವಿವೇಕಾನಂದರ ಮಾತಿದು: ''ನೀವು ಐದು ಭಾವನೆಗಳನ್ನು ಅರಗಿಸಿಕೊಂಡು ಅವನ್ನು ನಿಮ್ಮ ಜೀವನ ಸರ್ವಸ್ವವನ್ನಾಗಿ ಮಾಡಿಕೊಂಡರೆ, ಅದು ನಿಮ್ಮ ನಡೆ ನುಡಿಯೊಡನೆ ಒಂದಾದರೆ ನೀವು ಯಾವುದೇ ವ್ಯಕ್ತಿಗಿಂತಲೂ ಹೆಚ್ಚು ವಿದ್ಯಾವಂತರಾಗುತ್ತೀರಿ.''

ಅಧ್ಯಯನವು ಹೊರೆಯಾಗದೆ ಕ್ರಿಯಾಶೀಲವೆನಿಸಬೇಕಾದರೆ ಅದು ಜ್ಞಾನ, ಇಚ್ಛಾಶಕ್ತಿ, ಆಲೋಚನಾಶಕ್ತಿ, ಭಾವನಾಶಕ್ತಿ, ಸೌಂದರ್ಯಪ್ರಜ್ಞೆ ಮತ್ತು ಸಹಾನುಭೂತಿಯನ್ನು ವರ್ಧಿಸಬೇಕು. ನೈತಿಕಶುದ್ಧಿ ಮತ್ತು ಚಾರಿತ್ರ್ಯವು ಅಧ್ಯಯನ ಮತ್ತು ಅಭ್ಯಾಸದಿಂದ ಬೆಳೆಯುತ್ತಾ ಹೋಗಬೇಕೆಂಬುದು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ. ಸಹಾನುಭೂತಿಯಿಲ್ಲದ ರಾಜಕೀಯ ನಾಯಕ, ಲಂಪಟ ಪ್ರಾಧ್ಯಾಪಕ, ದುರಾಸೆ ತುಂಬಿದ ವೈದ್ಯ, ಬಡ್ಡಿವಸೂಲಿಯಲ್ಲಿ ನಿರತನಾದ ಶಿಕ್ಷಕ, ದುಶ್ಚಟಗಳ ದಾಸನಾದ ವಿಜ್ಞಾನಿ... ಇವೆಲ್ಲಾ ಜೀವನದ ವೈಪರೀತ್ಯಗಳು. ಜೀವನವು ಇಂತಹ ಮಿಶ್ರಣವಾದರೆ ಆ ವ್ಯಕ್ತಿಯು ಪಡೆದ ಶಿಕ್ಷಣವನ್ನು, ಮಾಡಿದ ಅಧ್ಯಯನವನ್ನು ಬೆಳೆಸಿಕೊಂಡ ವ್ಯಕ್ತಿತ್ವವನ್ನು ಆದರ್ಶವೆನ್ನಬಹುದೆ? ಕ್ರಿಯಾಶೀಲವೆನ್ನಬಹುದೆ? ಸ್ವಾಮಿ ವಿವೇಕಾನಂದರು, ''ಮಾನವನನ್ನು ಅಧ್ಯಯನ ಮಾಡು, ಅವನೊಂದು ಜೀವಂತ ಕವಿತೆ'' ಎನ್ನುತ್ತಾರೆ. ಅಂತಹ ಜೀವಂತ ಕವಿತೆ ನಾವಾಗಬೇಕಾದರೆ, ಅಂಥಾ ಸೌಂದರ್ಯವು ನಮ್ಮ ಬಾಳಿನಲ್ಲಿ ಪ್ರಕಟವಾಗಬೇಕಾದರೆ ಅಧ್ಯಯನದಲ್ಲಿ ಕ್ರಿಯಾಶೀಲತೆ, ಅಧ್ಯಯನದಿಂದ ಕ್ರಿಯಾಶೀಲತೆ ಮತ್ತು ಕ್ರಿಯಾಶೀಲ ಅಧ್ಯಯನವು ಅನಿವಾರ್ಯವಾಗಿದೆ. 



# ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ



ಬಂಗಾಳಿ ಮೂಲ: **ಸ್ವಾಮಿ ನಿರಾಮಯಾನಂದ** ಕನ್ನಡಕ್ಕೆ: **ಕುಮಾರಿ ಪಿ.ಉಷಾ**

ಭಾಗ ೧೬

‘‘**ಜ್ಞಾ**ನಿಯಾದ ಗುರುವಿನ ಬಳಿಯಲ್ಲಿ ಇದ್ದುಕೊಂಡು, ಸ್ವಲ್ಪವೂ ಚೈತನ್ಯವುಂಟಾಗದಿದ್ದರೆ, ಅಂಥವನ ಬಳಿ ಇದ್ದು ಏನು ಪ್ರಯೋಜನ? ಆಧ್ಯಾತ್ಮಿಕ ಜಗತ್ತಿನಲ್ಲಿ ಇರುವ ಪ್ರೀತಿ ಇನ್ನೆಲ್ಲಿಯೂ ಇಲ್ಲ. ಅದು ತಾಯಿಯ ಪ್ರೀತಿ, ತಂದೆಯ ಪ್ರೀತಿಗಿಂತ ಹತ್ತುಪಟ್ಟು ಹೆಚ್ಚಿನದು. ತಾಯಿಯ ಪ್ರೀತಿಗಿಂತಲೂ ಹೆಚ್ಚಿನ ಪ್ರೀತಿ ಜ್ಞಾನದಾತ ಗುರುವಿನದು. ಗುರು ನಮ್ಮ ಬಗ್ಗೆ ಚಿಂತಿಸಿದಷ್ಟು ಇನ್ನು ಯಾರು ತಾನೆ ಚಿಂತಿಸುತ್ತಾರೆ? ತಾಯಿಗೆ ಈ ಶರೀರದ ಚಿಂತೆ, ಅದು ಈ ಜನ್ಮದ್ದು ಮಾತ್ರ.

‘‘ಮೂರ್ಖನಿಗೆ ಆಧ್ಯಾತ್ಮಿಕ ಉನ್ನತಿಯಾಗದು. ಇಲ್ಲಿ ಮೋಸ ಹೋಗುವವನು ಅಲ್ಲಿಯೂ ಮೋಸಹೋಗುತ್ತಾನೆ. ‘ಮೂರ್ಖನಿಗೆ ಆಧ್ಯಾತ್ಮಿಕ ಉನ್ನತಿಯಾಗದು’ – ಇವೆಲ್ಲ ಠಾಕೂರರ axiomatic truth (ಸ್ವತಃಸಿದ್ಧ ಸತ್ಯ). ಎಲ್ಲವನ್ನೂ ತಿಳಿದುಕೊಳ್ಳುವ ಹಂಬಲ ವಿರಲಿ, ಪ್ರಯತ್ನ ನಡೆಯಲಿ. ನಾವು ಜೀವನಪರ್ಯಂತ ಕಲಿತಿದ್ದೇವೆ. ಎಷ್ಟೋ ಪುಸ್ತಕಗಳನ್ನು ಹಲವು ಬಾರಿ ಓದಿದ್ದೇವೆ – ಒಂದು ಬಾರಿಯೆ! ಅಂಥ ಒಳ್ಳೆಯ ಸ್ಮೃತಿಶಕ್ತಿ ಇಲ್ಲವಲ್ಲ , ಓದಿದ್ದನ್ನೆಲ್ಲ ಮರೆತತಿದ್ದೇವೋ ಏನೊ?

‘‘ಈಗಲೂ ನಾನು ಕಲಿಯುತ್ತಿದ್ದೇನೆ. ಹಳ್ಳಿಯ ಮುಖ್ಯಸ್ಥ ಬಂದು ಹೇಳಿ ಹೋದ, ‘ಹುಡುಗರ ಸಹಾಯದಿಂದ ಈ ಗಿಡಗಳನ್ನು ಕಿತ್ತು ನಾಶ ಮಾಡಿ’ ಅಂತ. ಬೀಜಗಳು ಉದುರುತ್ತವೆ, ಕಳೆಗಳು ರಕ್ತಬೀಜನಂತೆ ಪೊದರಾಗಿ ಬೆಳೆದುಕೊಳ್ಳುತ್ತವೆ. ನಿಜ, ಇವೆಲ್ಲವನ್ನು ಅವನಿಂದಲ್ಲದೆ ಯೂನಿವರ್ಸಿಟಿಯ ಬಿ.ಎ., ಎಂ.ಎ.ಗಳಿಂದ ತಿಳಿದುಕೊಳ್ಳಬೇಕೆ? ತಿಳಿಯುವುದು ಯಾರಿಂದಾದರೂ ಆಗಲಿ. ‘ಅಂತ್ಯಾದಪಿ ಪರೋ ಧರ್ಮಃ...। ಯುಕ್ತಿಯುಕ್ತಮುಪಾದೇಯಂ ವಚನಂ ಬಾಲಕಾದಪಿ ॥’ ಅಯುಕ್ತವಾದರೆ ಸಾಕ್ಷಾತ್ ಬ್ರಹ್ಮನ ಮಾತುಗಳಾದರೂ ಸರಿ, ತೃಣಕ್ಕೆ ಸಮಾನವೆಂದು ಭಾವಿಸುವೆ. ಹುಚ್ಚನ ಮಾತಿನಿಂದಲೂ, ಅದು ಸತ್ಯವಾಗಿದ್ದರೆ ಸ್ವೀಕರಿಸಬೇಕು.

‘‘ಮರಗಿಡಗಳನ್ನು ಗುರುತಿಸಲು ನಾವು ಹುಡುಗರನ್ನು ಕಾಡು ಮೇಡು ಅಲೆದಾಡುತ್ತಿದ್ದೆವು. ಈಗಿನ ಹುಡುಗರು ಹೀರೆಕಾಯಿ ಬಳ್ಳಿಯನ್ನೂ ಗುರುತಿಸಲಾರರು. ಸೋರೆ–ಕುಂಬಳ ಬಳ್ಳಿಗಳ ವ್ಯತ್ಯಾಸವೂ ಅವರಿಗೆ ಗೊತ್ತಿಲ್ಲ. ‘ಧಾನ್ಯದ ಮರದ ಹಲಗೆ’ ಎನ್ನುತ್ತಾರಲ್ಲ, ಹಾಗೆ! Garden-agriculture (ತೋಟ–ಗದ್ದೆ) ಮಾಡೆಂದು ಠಾಕೂರರು ನನ್ನನ್ನು ಈ ಹಳ್ಳಿಯಲ್ಲಿರಿಸಿರುವಾಗ ಇದನ್ನೇ ಸರಿಯಾಗಿ ಮಾಡಬೇಕು, ಎಲ್ಲವನ್ನೂ ತಿಳಿದುಕೊಳ್ಳಬೇಕು. ಎಷ್ಟೊಂದು ಊರುಗಳನ್ನು ಸುತ್ತಾಡುತ್ತಿದ್ದೆ, ಆದರೆ ಠಾಕೂರು ಇಲ್ಲೇ ಆಶ್ರಮವನ್ನು ಸ್ಥಾಪನೆ ಮಾಡಿದರಲ್ಲ! ಈಗ ೫೫ ಬಿಘಾ (ಸುಮಾರು ೧೮ ಎಕರೆ) ಜಮೀನು. ಏನು ಮಾಡಬೇಕೋ ಮಾಡಬಹುದು. ಮೊದಲಿಗೆ ಇಲ್ಲಿ ೨ ಬಿಘಾ ಮಾತ್ರ ಇತ್ತು. ಅದರಲ್ಲೆ ೨–೩ ಗಂಟೆ ತನಕ ಕೆಲಸ ನಡೆಯುತ್ತಿತ್ತು. ಮಣ್ಣು ಅಗೆದು, ಮುಸುಕಿನ ಜೋಳದ ಬೀಜವನ್ನು ಬಿತ್ತುತ್ತಿದ್ದೆ. ಅರ್ಧ ಪ್ಯಾಂಟ್ ಧರಿಸಿ, ಬೆಲ್ಟನ್ನು ಬಿಗಿಯದೆ ಕೆಲಸ ಮಾಡುತ್ತಿದ್ದೆ. ಬೆವರಿಳಿಯುತ್ತಿತ್ತು. ೨ ಗಂಟೆಯ ಹೊತ್ತಿಗೆ, ಕೆಲವು ದಿನ ೩ ಗಂಟೆಯ ನಂತರ, ನೀರಿನಲ್ಲಿ ಹಾಕಿಟ್ಟಿದ್ದ ತಂಗುಳನ್ನಕ್ಕೆ ಸ್ವಲ್ಪ ನಿಂಬೆಹಣ್ಣಿನ ರಸ ಹಿಂಡಿ ಊಟ ಮಾಡುತ್ತಿದ್ದೆ.’’

**೧೭ ಜನವರಿ, ೧೯೩೭:** ಅಮೆರಿಕಾ ಯಾತ್ರೆಗೆ ಮುನ್ನ ಕುಮಾರಿ ಭಕ್ತಿ (Ms. Rubel) ಹಾಗು ಶ್ರೀಮತಿ ಅನ್ನಪೂರ್ಣಾ (Mrs. Worcester) ಇಬ್ಬರು  ಮಾತ್ರವೇ ಬಂದು ಬಾಬಾ ಅವರನ್ನು ನೋಡಿ ಹೋಗುವುದಾಗಿ ಬರೆದಿದ್ದರು. ಬಾಬಾ ಬಹರಾಂಪುರದ ಒಬ್ಬ ಭಕ್ತೆಗೆ ಪತ್ರ ಬರೆಯಲು ಸೇವಕನಿಗೆ ಹೇಳಿದರು: ‘‘ನಾಳೆ ನಮ್ಮ ಆಶ್ರಮಕ್ಕೆ ಇಬ್ಬರು ದೇವಿಯರು ಬರುತ್ತಿದ್ದಾರೆ. ನೀನು ಅತ್ಯಗತ್ಯವಾಗಿ ಅವರ ದರ್ಶನ ಪಡೆಯಲು ಬರಬೇಕು.’’ ನಂತರ ಹೇಳಿದರು, ‘‘ನಿಜಕ್ಕೂ ಇವರೆಲ್ಲಾ ದೇವದೇವಿಯರು, ಠಾಕೂರರ ಲೀಲಾಸಹಾಯಕರಾಗಿ ಬಂದಿದ್ದಾರೆ.’’

**೧೮ ಜನವರಿ, ೧೯೩೭:** ಇಂದು ಸ್ವಾಮಿ ಶಾರದಾನಂದಜಿಯವರ ಜಯಂತಿ. ಮುಂಜಾನೆಯೇ ಭಕ್ತಿ, ಅನ್ನಪೂರ್ಣಾ ಹಾಗೂ ಕುಮಾರಿ ಫ್ರಾನ್ಸೆಸ್ ಬಂದಿದ್ದಾರೆ. ಅವರು ಬಾಬಾ ಅವರಿಗಾಗಿ ಈ ಸಲವೂ ಅನೇಕ ವಸ್ತುಗಳನ್ನು ತಂದಿದ್ದಾರೆ. ಬಾಬಾ ಕೂಡಾ ಅವರಿಗೆ ಕೊಡಲು ಸುಂದರವಾದ ಪೋಷಾಕು ತಯಾರು ಮಾಡಿಸಿದ್ದಾರೆ. ಅಸ್ಪಷ್ಟ ಹಾಗೂ ಒಡಕು ಮಾತುಗಳಲ್ಲಿ ಏನೇನೋ ಸಂಭಾಷಣೆ ನಡೆದವು. ‘ಸ್ಮೃತಿಕಥೆ’ ಹಾಗೂ ‘ಶ್ರೀ ರಾಮಕೃಷ್ಣ ಸಂಗೇ’ಯ ಕೆಲವು ಅಂಶಗಳನ್ನು ಅನುವಾದಿಸಿಟ್ಟಿರಲು ಅವರು ಶಿಷ್ಯನಿಗೆ ಹೇಳಿದ್ದರು. ಅವನು ಅದನ್ನು ಓದಿ ಹೇಳಿದಾಗ ಅವರೆಲ್ಲ ಬಹಳ ಸಂತಸಪಟ್ಟರು. ಅನಂತರ ಬೇಲೂರು ಮಂದಿರಕ್ಕೆ ಸಂಬಂಧಿಸಿದಂತೆ ಸ್ವಲ್ಪ ಮಾತುಕತೆಗಳಾದವು. ‘ಮಂದಿರ ಪ್ರತಿಷ್ಠಾಪನೆಗೆ ನೀವು ಬರಲೇಬೇಕು’ ಎಂದಾಗ ಬಾಬಾ, ‘‘ಖಂಡಿತವಾಗಿಯೂ ಬರುತ್ತೇನೆ. ಆಗ ನಾನಿರುತ್ತೇನೆ; ನೋಡಲು ಬರುತ್ತೇನೆ. ಸ್ವಾಮೀಜಿ ಹೇಳಿದ್ದಾರೆ, ತಾವೂ ನೋಡುವುದಾಗಿ.’’ ಎಂದಾಗ ಎಲ್ಲರೂ ಪರಸ್ಪರ ಮುಖ ಮುಖ ನೋಡಿಕೊಂಡರು. ಐದು ಗಂಟೆಯ ರೈಲಿನಲ್ಲಿ ಭಕ್ತಿ ಹಾಗೂ ಅನ್ನಪೂರ್ಣಾ ಹೊರಟು ಹೋದ ಮೇಲೆ, ಸಂಜೆಯೆಲ್ಲ ಬಾಬಾ ಅವರ ಸ್ನೇಹ, ಪ್ರೀತಿ ಹಾಗೂ ಭಕ್ತಿಯ ವಿಚಾರವನ್ನೇ ಹೇಳತೊಡಗಿದರು.

**೧೯ ನೆಯ ಸಂಜೆ:** Hugo, Tolstoy ಹಾಗೂ Corelliಯ ಕಾದಂಬರಿಗಳ ಬಗ್ಗೆ ಬಾಬಾ ಮಾತನಾಡಿದರು. ಅನಂತರ, ಗೆರಿಬಾಲ್ಡಿ

ರೋಮನ್ನು ಗೆದ್ದ ಮೇಲೆ ಕಾಪ್ರೇರಾದಲ್ಲಿ ಬೇಸಾಯ ಮಾಡಲು ಹೋದ ವಿಷಯ, ಹಾಗೂ ದೇಶಕ್ಕೆ ಬಂದೊದಗಿದ ದುಃಖದಿಂದ ಮ್ಯಾಜಿನಿ ಜೀವನದುದ್ದಕ್ಕೂ ಕಪ್ಪುಬಟ್ಟೆ ಧರಿಸಿದ ಸಂಗತಿ – ಇವೆಲ್ಲ ತಮ್ಮ ಮೇಲೆ ಯಾವ ರೀತಿ ಪ್ರಭಾವ ಬೀರಿತೆಂಬುದನ್ನು ಹೇಳಿದರು.

''ತನ್ನ ಅನಾಥಾಶ್ರಮಕ್ಕೆ ಪ್ರಾರ್ಥನೆಯಿಂದಲೇ ಪ್ರತಿಯೊಂದು ಇಟ್ಟಿಗೆಯೂ ಸಿಕ್ಕಿತೆಂದು ಜಾರ್ಜ್ ಮುಲ್ಲರ್ ಹೇಳುತ್ತಾನೆ. ಬೂಕರ್ ಟಿ. ವಾಷಿಂಗ್ಟನ್‌ನ 'Up from Slavery' ಪುಸ್ತಕವನ್ನು ಶರತ್ ಮಹಾರಾಜರು (ಸ್ವಾಮಿ ಶಾರದಾನಂದರು) ನನಗೆ ಕೊಡುತ್ತಾ, ''ತಮ್ಮಾ, ನಿನ್ನ ಆಶ್ರಮದಲ್ಲಿನ ಹಾಗೆಯೇ ಬೂಕರ್ ಕೂಡ ಎಷ್ಟು ಕಷ್ಟಪಟ್ಟಿದ್ದಾನೆ! ಎಷ್ಟು ಬಾರಿ ಪ್ರಯತ್ನಪಟ್ಟ, ಎಷ್ಟು ಬಾರಿ ಸೋತ, ಕೊನೆಗೆ ಸಫಲನಾದ. ಇವರೆಲ್ಲರೂ 'men with mission, born to be immortal' (ಮಹಾವ್ರತವನ್ನು ತೊಟ್ಟ, ಅಮರರಾಗಲು ಜನ್ಮವೆತ್ತಿದ ಮಾನವರು). ಅವರು ಅಮರರಾಗಲೆಂದೇ ಜನ್ಮ ತಳೆದರು'' ಎಂದರು.

''ಜನರಲ್ ಬೂತ್‌ರವರ ಪುಸ್ತಕ 'In Darkest England and the Way-out' ಇಲ್ಲಿದೆ. ನೀವೆಲ್ಲಾ ಇದನ್ನು ಓದಿ. ಅವನು ದೇಶಕ್ಕಾಗಿ, ಸಮಾಜಕ್ಕಾಗಿ feel ಮಾಡಿ (ಭಾವಿಸಿ), ಮಾರ್ಗ ಕಂಡು ಹುಡುಕಿ, ತನ್ನ ಕಾರ್ಯಕ್ಕಾಗಿ ಪ್ರಾಣವನ್ನರ್ಪಿಸಲೂ ಸಿದ್ಧರಾಗಿದ್ದ ನೆಂಬುದನ್ನು ಅಲ್ಲಿ ನೋಡುವಿರಿ. 'Salvation Army (ಮುಕ್ತಿಯ ಸೈನ್ಯ) – We march along you'(ನಿಮ್ಮೊಂದಿಗೆ ನಾವು ನಡೆಯುವೆವು). ಸ್ವಾಮೀಜಿ ಹೇಳುತ್ತಿದ್ದರು, 'ನಮ್ಮದೂ ಆ ರೀತಿಯ Salvation Armyಯೇ; ನಾವೂ ಕೂಡ 'We march along you' ಎನ್ನಬೇಕು, ಅದನ್ನು ಮಾಡಿಯೂ ತೋರಿಸಬೇಕು' ಅಂತ.''

೨೦ ಜನವರಿ, ೧೯೩೭: ಕಲ್ಕತ್ತೆಯಿಂದ ಕೆಲ ದಿನಗಳ ಹಿಂದೆ ಯುವಕನೊಬ್ಬ ಬಂದಿದ್ದ. ಅವನು ಮಂತ್ರದೀಕ್ಷೆ ಪಡೆದಿದ್ದ; ಕಾನೂನು ಓದುತ್ತಿದ್ದಾನೆ. ಅವನಿಗೆ ವೈರಾಗ್ಯವನ್ನು ಕುರಿತಾಗಿ ಬಾಬಾ ಅನೇಕ ವಿಷಯಗಳನ್ನು ಹೇಳುತ್ತಿದ್ದಾರೆ. ''ಸ್ವಾಮೀಜಿ, 'Bar and Religion cannot go together' (ವಕಾಲತ್ತು ಹಾಗೂ ಧರ್ಮ ಜೊತೆಗೆ ಹೋಗುವುದಿಲ್ಲ) ಎಂದು ಹೇಳುತ್ತಿದ್ದರು. ಮರಣಕ್ಕೆ ವಯಸ್ಸೆಂಬುದಿದೆಯೆ?* ದಿನ, ಕ್ಷಣ ಎಂಬುದಿದೆಯೆ? ತಾಯಿಯ ಉದರದಲ್ಲೂ ಮಕ್ಕಳು ಮೃತರಾಗಿರುವುದು ನಮಗೆ ತಿಳಿದಿದೆ. ಮರಣಕ್ಕೆ ದಿನ, ಕ್ಷಣಗಳಿಲ್ಲದಿರುವಾಗ, ಭಗವಂತನನ್ನು ಪ್ರಾರ್ಥಿಸಲು ದಿನ, ಕ್ಷಣಗಳನ್ನು ನೋಡುವುದೇಕೆ? ಮತ್ತೆ ನಿನಗಾದರೋ Line Clear ಆಗಿದೆ (ಅಡಚಣೆಗಳಿಲ್ಲ); ತಾಯಿ ಇಲ್ಲ, ಇಬ್ಬರು ಅಣ್ಣಂದಿರು. ನೀನೀಗ ನಿನ್ನ ಕಾಲಮೇಲೆ ನಿಂತಿದ್ದೀಯೆ.''

೨೧ ಜನವರಿ, ೧೯೩೭: ಹಗಲುಹೊತ್ತು ಆಶ್ರಮದಲ್ಲಿ ಇಂಜಿನಿಯರ್ ಹಾಗು ಕಂಟ್ರಾಕ್ಟರ್‌ಗಳ ಜತೆಯಲ್ಲಿ (ಅತಿಥಿಗೃಹ ನಿರ್ಮಾಣ ಕುರಿತು) ಮಾತುಕತೆ ನಡೆದಿದೆ. ಸಂಜೆ ಅವರೆಂದರು, ''Universityಯಲ್ಲಿ Common Sense ಹಾಳು ಮಾಡುತ್ತಾರೆ.

* ೪–೫ ವರ್ಷಗಳಲ್ಲಿ ಈ ಯುವಕ ಕಾಲೆರಾದಿಂದ ಮೃತನಾದ.

ಇದು ನನ್ನ ಮಾತಲ್ಲ; P.C.Roy (ಸರ್ ಪ್ರಫುಲ್ಲಚಂದ್ರ ರಾಯ್) ಅವರೇ ಹೇಳುತ್ತಾರೆ. ಸ್ವ-ಪ್ರಯತ್ನದಿಂದ ಹೊಸದನ್ನೇನಾದರೂ ಮಾಡು. ಹ್ಯುವೆನ್ ತ್ಸಾಂಗ್‌ನ ಜೀವನ ಕುರಿತು ಬಂಗಾಳಿಯಲ್ಲಿ ಬರೆದರೆ ಎಷ್ಟೋ ಉಪಯೋಗವಾಗುತ್ತದೆ. ಈ ಪುಸ್ತಕಗಳೆಲ್ಲ ಪುರಾಣಗಳಿಗಿಂತಲೂ ಸತ್ಯ, ಇವನ್ನು 'ಇತಿಹಾಸ'ವೆನ್ನಬಹುದು.''

೨೨ ಜನವರಿ, ೧೯೩೭: ಮಾಣಿಕ್‌ಗಂಜಿನ ಆರು ಮಂದಿ ಹುಡುಗರಿಗೆ ಇಂದು ಮಂತ್ರದೀಕ್ಷೆ ನಡೆಯಲಿದೆ. ಅನಂತರ ಒಂದು ಸಂದರ್ಭದಲ್ಲಿ ಬಾಬಾ ಹೇಳುತ್ತಿದ್ದಾರೆ: ''ನಮಗೆ ಎಷ್ಟು ತಲೆಯಿಲ್ಲವೆಂದರೆ, ತಲೆಪೂರ್ತಿ ತುಂಬಿಹೋಗಿದೆ; ಆದರೆ ಎಷ್ಟು ಬುದ್ಧಿಯಿದೆಯೋ, ಅದರ ಸಾಮರ್ಥ್ಯದಿಂದಲೇ ಎಷ್ಟೊಂದು ಜಗಳ, ಕೋಪ, ಮಾನ – ಅಭಿಮಾನ! ನಾವಾದರೋ ಮೊದಲಿನಿಂದಲೇ ನೋಡಿ, ಬಹಳ ಆಲೋಚಿಸಿ ಕೆಲಸ ಮಾಡುತ್ತೇವೆ.''

ಕೆಲವು ದಿನಗಳಿಂದ ಬಾಬಾ ಹೊಸ ಗುಲಾಬಿ ಸಸಿಗಳನ್ನು ನೆಡುವುದರಲ್ಲೇ ದಿನ ಕಳೆಯುತ್ತಿದ್ದಾರೆ. ಸಸಿಗಳು ಮಧುಪುರ (ಸಂತಾಲ ಪರಗಣಾ)ದಿಂದ ಬಂದಿವೆ. ಗುಲಾಬಿ ಗಿಡಗಳ ಸಂವೇದನೆ ವಿಷಯ ಬಂತು. ಬಾಬಾ ಹೇಳಿದರು, ''ಹೂವಿನ ಗಿಡಗಳೂ ಹೇಳಿದ ಮಾತನ್ನು ಕೇಳುತ್ತವೆ; ಹೃದಯದ ಭಾಷೆಯನ್ನರಿಯುತ್ತವೆ. ಮನುಷ್ಯರೇ ಕೇಳುವುದಿಲ್ಲ. ಕೆಲವು ವರ್ಷಗಳ ಹಿಂದೆ ಶ್ರೀಮಾತೆಯವರ ಜನ್ಮದಿನಕ್ಕೆ ಮುನ್ನ ಹೊಸ ಗುಲಾಬಿ ಗಿಡಗಳು ಚಿಗುರಿ ನಿಂತಿದ್ದವು. ನಾನು ಮನಸ್ಸಿನಲ್ಲೇ ಹೇಳಿಕೊಂಡೆ, 'ಅಮ್ಮಾ, ಈ ಗಿಡದಲ್ಲಿ ಹೂಗಳು ಅರಳಿದರೆ ಅವುಗಳಿಂದ ನಿನ್ನನ್ನು ಅಲಂಕರಿಸುತ್ತೇನೆ' ಅಂತ. ಏನು ಹೇಳಲಿ, ಅವರ ಜಯಂತಿಗೆ ಕೆಲವು ದಿನಗಳ ಮೊದಲು ಮೊಗ್ಗು ಕಾಣಿಸಿಕೊಂಡಿತು; ಜಯಂತಿಯ ದಿನ ಮುಂಜಾನೆ ಎದ್ದು ನೋಡಿದರೆ, ಗಿಡದಲ್ಲಿ ಐದು ಹೂಗಳು ಅರಳಿವೆ. ಆನಂದದಿಂದ ಅವುಗಳನ್ನು ತಾಯಿಗೆ ಸಮರ್ಪಿಸಿದೆ. ಸುಮಾರು ಒಂದು ತಿಂಗಳ ಬಳಿಕ ಸ್ವಾಮೀಜಿ ಜಯಂತಿ; ಮತ್ತೆ ಅದೇರೀತಿ ಭಾವಿಸಿಕೊಂಡೆ, ಈ ಸಲ ಏಳು ಹೂಗಳು! ಬಹಳ ಆನಂದವಾಯಿತು. 'ಠಾಕೂರರ ಜಯಂತಿಗೆ ಹೂ ಬಿಡುವುದೆ?' ಎಂದು ಯೋಚಿಸಿದೆ. ಏನಾಶ್ಚರ್ಯ! ಹನ್ನೆರಡು ದೊಡ್ಡ ದೊಡ್ಡ ಹೂಗಳು! ಆ ವರ್ಷ ಅಷ್ಟೇ ಹೂಗಳು.''

೨೩ ಜನವರಿ, ೧೯೩೭: ಸಂಜೆ ಹೊತ್ತು. ಸ್ವಾಮಿ ಅಖಂಡಾನಂದರು ಕಲ್ಕತ್ತೆಯ ಆ ಯುವಕ† ಭಕ್ತನಿಗೆ ಹಾಡಿನ * ಪುಸ್ತಕವನ್ನು ಉಲ್ಲೇಖಿಸುತ್ತ ಹೇಳಿದರು: ''ಹರಾಧನನಿಗೆ ೭ ಮಕ್ಕಳೋ, ೧೦ ಮಕ್ಕಳೊ? ನಿನಗೆ ಇನ್ನು ಮಕ್ಕಳಾಗುವ ಆಸೆ ಒಳ್ಳೆಯದಲ್ಲ, ಏನೆನ್ನುತ್ತಿ? ಇಷ್ಟೊಂದು ಮಕ್ಕಳು ಹೋದರು; ಎಲ್ಲಿಂದ ಬಂದರು, ಎಲ್ಲಿಗೆ ಹೋದರು? ಎಲ್ಲವೂ ಮಾಯೆ. (ಒಬ್ಬ ಭಕ್ತನನ್ನು ತೋರಿಸುತ್ತ) ಇವನೊಬ್ಬ ಹೇಳುತ್ತಾನೆ, ಮತ್ತೆ ಎಲ್ಲರೂ ಬಂದರು, ಆಮೇಲೆ ಮತ್ತೆ ಹೋದರು. ಅದೂ ಮಾಯೆ – ಅಂತ.

† ಆ ಯುವಕನ ಹೆಸರು ಹಾರಾಧನ ಬಸು; ಆಗ ಅವನು Law ಓದುತ್ತಿದ್ದ.

* ಹಾಡಿನ ಪುಸ್ತಕದ ೧ನೇ ಭಾಗದಲ್ಲಿ ಹಾರಾಧನನಿಗೆ ಹತ್ತು ಮಂದಿ ಮಕ್ಕಳಿದ್ದರು; ಒಬ್ಬೊಬ್ಬರಾಗಿ ಕಳೆದು ಹೋದರು, ಕೆಲವರು ಸತ್ತುಹೋದರು ಎಂದಿದೆ. ೨ನೇ ಭಾಗದಲ್ಲಿ ಅವರೆಲ್ಲರೂ ಮತ್ತೆ ಬಂದರು ಎಂದಿದೆ.

‘‘ಮಾಯೆಯಲ್ಲಿ ಎರಡು ವಿಧ. ವಿದ್ಯಾಮಾಯೆ ಹಾಗೂ ಅವಿದ್ಯಾಮಾಯೆ. ಒಂದು ಸತ್ತ್ವಪ್ರಧಾನ, ಇನ್ನೊಂದು ತಮಃ ಪ್ರಧಾನ. ಮೊತ್ತಮೊದಲಿಗೆ ಅಖಂಡ ಬ್ರಹ್ಮಚೈತನ್ಯವಿತ್ತು ; ಅನಂತರ ಮಾಯೋಪಾಧಿಕ ಈಶ್ವರ-ಚೈತನ್ಯವುಂಟಾಯಿತು – ಅದು ಸರ್ವಜ್ಞ, ಸರ್ವಶಕ್ತ, ಸ್ವತಂತ್ರ. ಅನಂತರ ಅವಿದ್ಯೋಪಾಧಿಕ ಜೀವಚೈತನ್ಯ – ಅದು ಅಲ್ಪಜ್ಞ, ಅಲ್ಪಶಕ್ತ ಹಾಗೂ ಪರತಂತ್ರ. ಅವುಗಳು ಮಹಾಕಾಶ ಹಾಗೂ ಘಟಾಕಾಶಗಳಂತೆ. ಘಟಾಕಾಶ ಎಂಥದು? ಈ ಮನೆಯೊಳಗೆ ಸ್ವಲ್ಪ ಆಕಾಶ; ಮಡಕೆಯಲ್ಲಿ, ಪಾತ್ರೆಯಲ್ಲಿ ಆಕಾಶ ಖಂಡ ಖಂಡವಾಗಿರುವಂತೆ. ಇನ್ನು ಕೂಟಸ್ಥ ಚೈತನ್ಯ ಹೇಗಿದೆ? ಕಮ್ಮಾರನ ಅಡಿಗಲ್ಲಿನಂತೆ. ಎಷ್ಟು ಹೊಡೆದರೂ ಅದು ಸ್ಥಿರವಾಗಿರುತ್ತದೆ. ಜೀವಚೈತನ್ಯವು ಈಶ್ವರ ಚೈತನ್ಯ, ಬ್ರಹ್ಮಚೈತನ್ಯದೆಡೆಗೆ ಸಾಗಬೇಕು. ಇದು ಗುರಿ. ಇದಕ್ಕೆ ಮಾರ್ಗವೇನೆಂದರೆ, ವ್ಯಾಕುಲತೆ, ವಿವೇಕ, ವೈರಾಗ್ಯ. ವೈರಾಗ್ಯದಲ್ಲಿ ಎಷ್ಟೊಂದು ವಿಧಗಳಿವೆ – ಸ್ಮಶಾನ ವೈರಾಗ್ಯ, ವಿಚಾರ ವೈರಾಗ್ಯ.

‘‘ಸ್ವಾಮೀಜಿ ಹೇಳುತ್ತಿದ್ದರು, ‘ನೋಡು, ನಾವು sincere (ಪ್ರಾಮಾಣಿಕ) ಆಗಿರಬೇಕು. ಸ್ಮಶಾನಕ್ಕೆ ಹೋದರೆ ಸಂಸಾರಿ, ಗೃಹಸ್ಥರಿಗೂ ವೈರಾಗ್ಯವುಂಟಾಗುವುದು. ಪ್ರಿಯ ವ್ಯಕ್ತಿಗಳ ದೇಹ ಸುಟ್ಟು ಭಸ್ಮವಾಗುವುದನ್ನು ಕಣ್ಣಾರೆ ಕಂಡಾಗ ಕ್ಷಣಿಕ ವೈರಾಗ್ಯ ಎಲ್ಲರಿಗೂ ಉಂಟಾಗುತ್ತದೆ. ಅವರು ಮತ್ತೆ ಸಂಸಾರಕ್ಕೆ ಮರಳಿ ಮಾಯೆಯಲ್ಲಿ ಎಲ್ಲವನ್ನೂ ಮರೆತುಬಿಡುತ್ತಾರೆ, ಮುಳುಗಿಬಿಡುತ್ತಾರೆ. ಆದರೆ ಸಂಸಾರವೆಂದರೇನೆಂದು ನಮಗೆ ತಿಳಿದಿದೆ. ಆದ್ದರಿಂದ, ಮತ್ತೆ ಅದಕ್ಕೆ ಮರಳಬಾರದು. ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಂಡರೆ ಒಳ್ಳೆಯದೆ. ಒಂದು ವೇಳೆ ಆಗದಿದ್ದರೂ ಆಗಿಲ್ಲ ಅಷ್ಟೆ, ಆದರೆ ಹಿಂದಿರುಗಬಾರದು. ಹಾಯಿ ಬಿಚ್ಚಿ ನಿಧಾನವಾಗಿ ಸಾಗೋಣ. ಅನುಕೂಲಕರವಾದ ಗಾಳಿ ಬೀಸಿದಾಗ ಮುಂದೆ ಸಾಗೋಣ, ಗಾಳಿ ಪ್ರತಿಕೂಲವಾಗಿದ್ದಾಗ ನಿಲ್ಲೋಣ. ಆದರೂ ಹಿಂದಿರಬಾರದು.’ ಅಂತ.

‘‘ಸಂಸಾರದಲ್ಲಿ ಕೆಲವೊಂದು ಈಶ್ವರನ ಸೃಷ್ಟಿ – ತಾಯಿತಂದೆ, ಈ ಜನ್ಮ ಇತ್ಯಾದಿ. ಉಳಿದವೆಲ್ಲ ಜೀವಸೃಷ್ಟಿ – ವಿವಾಹ, ಸಂತಾನೋತ್ಪತ್ತಿ ಹೀಗೆ. ಇವೆಲ್ಲ ಏಕೆ? ಏಕೆ ಎಂದರೇನು? ಈ ಕ್ಷಣದಲ್ಲಿ ಯಾರಾದರೂ ಸತ್ತರೆ ಅದನ್ನು ತಡೆಹಿಡಿಯಲಾಗದು. ನಾನು ಸತ್ತರೂ ತಡೆಯಲಾಗುವುದೆ? ನನಗೆ ಅವನು ಏನಾಗಬೇಕು, ಅಥವಾ ನಾನು ಅವನಿಗೆ ಏನಾಗಬೇಕು? ಹೀಗೆ ವಿಚಾರ ಮಾಡಬೇಕು.

‘‘ಒಂದು ಸಲ ಮಾತ್ರ ನನ್ನ ಹೃದಯ ತಾಯಿಗಾಗಿ ಪರಿತಪಿಸಿತು. ಚಿಕ್ಕವಯಸ್ಸಿನಲ್ಲೇ ಮನೆ ಬಿಟ್ಟಿದ್ದೆ; ಹಿಮಾಲಯದ ದಾರಿಯಲ್ಲಿ ತೆಹರಿಯಲ್ಲಿದ್ದೆ. ಆ ಕ್ಷಣವೇ ಅಲ್ಲಿ ಕುಳಿತೆ.ಆಗ ತಾನಾಗಿಯೇ ಈ ಭಾವನೆಗಳೆಲ್ಲಾ ಬಂದವು. ಕೊನೆಗೆ ಅನ್ನಿಸಿತು, ತಾಯಿ ವಿಶ್ವಜನನಿಯ ಶಾಂತಿಪೂರ್ಣ ಮಡಿಲಲ್ಲಿ ನಾನು ಚಿರಕಾಲ ಆನಂದಿಸಿದ್ದೇನೆ. ಹೀಗಿರುವಾಗ ನನ್ನ ತಾಯಿ ಇನ್ನು ಯಾರು? ಯಾವ ತಾಯಿ ಮರಣ ಬಂದಾಗ ನನ್ನನ್ನು ಒಂದು ಕ್ಷಣವೂ ಹಿಡಿದಿಟ್ಟುಕೊಳ್ಳಲಾರಳೋ, ಅವಳಿಗಾಗಿ ನನ್ನ ಈ ತಾಯಿಯನ್ನು ಕಳೆದುಕೊಳ್ಳಲು ಹೀಗೆ ಕುಳಿತುಬಿಟ್ಟಿದ್ದೇನಲ್ಲ! ನೋಡುತ್ತೇವೆ, ಯಾವ ಮಗ ಸಂಸಾರ ಮಾಡುತ್ತಾನೋ, ಮದುವೆಯಾಗುತ್ತಾನೋ ಅವನನ್ನೇ ತಾಯಂದಿರು ಪ್ರೀತಿಸುತ್ತಾರೆ. ‘ನನ್ನ ಈ ಮಗನೇ ಉತ್ತಮನು’ ಎನ್ನುತ್ತಾರೆ. ಆದರೆ ಮದುವೆಯ ನಂತರ ಮಗ ಹೆಂಡತಿಯಲ್ಲೇ ಆಸಕ್ತನಾಗಿ ತಾಯಿಯನ್ನು ಮರೆತಾಗ, ಅದೇ ತಾಯಿ ತದ್ವಿರುದ್ಧ ಮಾತನಾಡುತ್ತಾಳೆ. ‘ಅಯ್ಯೋ! ಮದುವೆಯಾಗದೆ (ಸಾಧುವಾಗಿ) ಹೊರಗೆ ಹೋದವನೇ ಉತ್ತಮನು’ ಎನ್ನುತ್ತಾಳೆ. ತಾಯಿ ಸೊಸೆಯನ್ನು ದೂರುತ್ತಾಳೆ; ಸೊಸೆಯು ಅತ್ತೆಯನ್ನು ದೂರುತ್ತಾಳೆ. ಮಗ ಸೊಸೆಯನ್ನು ಕೋಣೆಗೆ ಕರೆದುಕೊಂಡು ಹೋಗಿ, ಅಗಳಿ ಹಾಕಿ, ಹಾಸಿಗೆ-ದಿಂಬುಗಳಿಗೆ ನಾಲ್ಕು ಬಾರಿಸಿ, ಸದ್ದು ಮಾಡುತ್ತ ಹೆಂಡತಿಗೆ ಕಲಿಸಿಕೊಡುತ್ತಾನೆ, ‘ನೀನು ಜೋರಾಗಿ ಅಳು. ನಾನು ನಿನಗೆ ಹೊಡೆಯುತ್ತಿದ್ದೇನೆಂದು ತಾಯಿ ತಿಳಿದುಕೊಳ್ಳುತ್ತಾಳೆ’ ಎಂದು.’’ ಮಕ್ಕಳೆಲ್ಲ ಜೋರಾಗಿ ನಗುತ್ತಿದ್ದಾರೆ. ಹಿರಿಯರು ಗಂಭೀರವಾಗಿ ಕೇಳುತ್ತಿದ್ದಾರೆ. ಬಾಬಾ ನಿಧಾನವಾಗಿ, ‘‘ವಿವಾಹದ ಮೇಲೆ ಶಾಂತಿ ಇರುತ್ತದೆಯೆ?’’ ಎಂದರು.

‘‘ಠಾಕೂರರು ಹೇಳುತ್ತಿದ್ದರು, ‘ಅಜ್ಜಿಯನ್ನು ಮುಟ್ಟಿದ ಮೇಲೆ ಎಷ್ಟು ಬೇಕಾದರೂ ಆಟವಾಡು. ಅಗ ‘ಕಳ್ಳ’ನಾಗುವ ಭಯವಿಲ್ಲ’ ಅಂತ. ಆಗ ಹೇಗಿರುತ್ತದೆ ಗೊತ್ತೆ? **‘ನಿರ್ಗಚ್ಛತಿ ಜಗಜ್ಜಾಲಾತ್ ಪಿಂಜರಾದಿವ ಕೇಸರೀ’** – ಸಿಂಹ ಪಂಜರದಿಂದ ಹೊರಬಂದಂತೆ, ಸಂಸಾರದ ಮಾಯಾಜಾಲವನ್ನು ಕಿತ್ತೊಗೆದು ವೈರಾಗ್ಯವಂತನು ಮುಕ್ತನಾಗುವನು. **‘ವಾಚಾಮತೀತೋ ವಿಷಮೋ ವಿಷಯಾಶಾ..’** – ವಿಷಯವಸ್ತುಗಳನ್ನು ಭೋಗಿಸುವ ಆಸೆ ಶಬ್ದಗಳಿಂದ ವರ್ಣಿಸಲಾಗದಷ್ಟು ಭಯಂಕರ. **‘ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್’ –** ಯಾವ ಕ್ಷಣ ವೈರಾಗ್ಯವುಂಟಾಗುವುದೋ, ಆಗಲೇ ಹೊರಡಬೇಕು, ಪ್ರವ್ರಜ್ಯವನ್ನು (ಅಂದರೆ ಸಂನ್ಯಾಸವನ್ನು) ಸ್ವೀಕರಿಸಬೇಕು. ದಿಕ್ಕುದೆಸೆಗಳ ಯೋಚನೆಯಿಲ್ಲ, ಯಾವ ದಿಕ್ಕಾದರೂ ಸರಿಯೆ.

‘‘ಭಗವಂತನು ಮನುಷ್ಯರೂಪದಲ್ಲಿ ಬಂದು ಮನುಷ್ಯನಿಗೆ ಜ್ಞಾನ ನೀಡುತ್ತಾನೆ. ಬುದ್ಧದೇವ ತನ್ನ ತಂದೆತಾಯಿಯರಿಗೆ ಇಳಿವಯಸ್ಸಿನಲ್ಲಿ ಹುಟ್ಟಿದ. ಅವನನ್ನು ಏನೇನೋ ಮಾಡಿ ಬಂಧನದಲ್ಲಿಟ್ಟಿದ್ದರು. ಆದರೂ ಕೊನೆಗೆ ಅವನು ಎಲ್ಲವನ್ನೂ ತ್ಯಜಿಸಿಬಿಟ್ಟ. ವಸ್ತುಲಾಭಕ್ಕಾಗಿ (ಸತ್ಯದ ಸಾಕ್ಷಾತ್ಕಾರಕ್ಕಾಗಿ) ಮೊದಲು pessimist (ನಿರಾಶಾವಾದಿ) ಯಾಗಬೇಕು. ಎಲ್ಲವೂ ಕೆಟ್ಟದ್ದೇ ಎಂಬ ಭಾವನೆ ಅದು. ಜನ್ಮ, ಮೃತ್ಯು, ಜರೆ, ವ್ಯಾಧಿ – ಈ ಜಗತ್ತಿನಲ್ಲಿ ಎಲ್ಲವೂ ಕೆಟ್ಟದ್ದೇ ಎಂದು. ಆಗಲೇ ವೈರಾಗ್ಯವುಂಟಾಗುವುದು. ವಸ್ತುಲಾಭವಾದ ಮೇಲೆ optimist (ಆಶಾವಾದಿ) ಆಗಬೇಕು. ಆಗ ಎಲ್ಲವೂ ಒಳ್ಳೆಯದೇ, ಆಗಲೇ ಎಲ್ಲರನ್ನೂ ನಿಜವಾಗಿ ಪ್ರೀತಿಸಲು ಸಾಧ್ಯ.

‘‘ಪ್ರವರ್ತಕ, ಸಾಧಕ, ಸಿದ್ಧ. ಪ್ರವರ್ತಕನು ಆರಂಭದನಲ್ಲಿ ಸ್ವಲ್ಪ ಕಷ್ಟಪಟ್ಟು, ಪಟ್ಟುಹಿಡಿದು ಪ್ರಯತ್ನಿಸಬೇಕು. ಕೊನೆಗೆ ಅದೇ ಸ್ವಾಭಾವಿಕವಾಗುತ್ತದೆ. ಠಾಕೂರರ ಬಳಿಗೆ ಎಲ್ಲವನ್ನೂ ತ್ಯಜಿಸಿ ಎಷ್ಟು ಮಂದಿ ಹುಡುಗರು ಬಂದಿದ್ದರು? ಅವರ ಮೂಲಕವೇ ಠಾಕೂರರು ಯಾವ ಧರ್ಮಚಕ್ರವನ್ನು ತಿರುಗಿಸಿದರೋ ಅದು ಈಗಲೂ ತಿರುಗುತ್ತಿದೆ.

‘‘ವಿವೇಕಚೂಡಾಮಣಿಯಲ್ಲಿ ಶ್ರೀಶಂಕರರು ಹೇಳುತ್ತಾರೆ: ‘ಎಲ್ಲ ಜನ್ಮಗಳಿಗಿಂತಲೂ ಮಾನವ ಜನ್ಮ ಶ್ರೇಷ್ಠವಾದುದು. ಮುಕ್ತಿಲಾಭ – ಜ್ಞಾನಲಾಭವನ್ನು ಮಾಡಿಕೊಳ್ಳಬೇಕಾದರೆ ದೇವತೆಗಳೂ ಮನುಷ್ಯನ

ಶರೀರವನ್ನು ಧರಿಸಿ ಬರಬೇಕು. ಅದಲ್ಲದೆ, ಯಾರಿಗೆ ಸದ್ಗುರುಗಳ ಆಶ್ರಯ ಲಭಿಸಿದೆಯೋ ಅವರ ಅದೃಷ್ಟ ಅದೆಂಥದು! ಸದ್ಗುರುವಿನ ಆಶ್ರಯ ಲಭಿಸಿಯೂ ಅವರ ಕೃಪೆಯನ್ನು ತಿಳಿಯಲಾಗದವರಿಗೆ ಏನು ತಾನೆ ಹೇಳಲಿ?' ಜ್ಞಾನಯೋಗದ ಮಾರ್ಗ ಬಹಳ ಕಠಿಣ. ರಾಜಯೋಗ ಮಾಡಲು ಯೋಗ್ಯವಾದ ಶರೀರ ಯಾರಿಗಿದೆ? ಈ ಯುಗದಲ್ಲಿ ಭಕ್ತಿಯೋಗ ಸಹಜ, ಅದರೊಂದಿಗೆ ಕರ್ಮಯೋಗ. ಭಗವಂತನ ಉಪಾಸನೆಯೆಂದು ತಿಳಿದು, ಆತನನ್ನೇ ಸ್ಮರಿಸುತ್ತ, ಆತನಿಗೆ ಫಲವನ್ನು ಸಮರ್ಪಿಸಿ ಎಲ್ಲ ಕೆಲಸಗಳನ್ನೂ ಮಾಡಬೇಕು.''

**೨೫ ಜನವರಿ, ೧೯೩೭:** ಇಂದೂ ಕಲ್ಕತ್ತೆಯ ಭಕ್ತ ಯುವಕನನ್ನು ಉದ್ದೇಶಿಸಿ ಬಾಬಾ ಹೇಳುತ್ತಿದ್ದಾರೆ: ''ವಕೀಲನಿಗೆ ಸುಳ್ಳು ಹೇಳಿಯೇ ಹಣ ಗಳಿಸಬೇಕಾಗುವುದು. ಸತ್ಯನುಡಿದರೆ ೨೫ ರೂಪಾಯಿ ಕೂಡಾ ಸಂಪಾದಿಸಲಾಗದು. ಬಹರಂಪುರದ '--'ಬಾಬು ಬ್ರಹ್ಮಸಮಾಜದ ಭಾವದಿಂದ ಕೂಡಿದವರಾಗಿದ್ದರು. ಕಕ್ಷಿಗಾರರು ಬಂದೊಡನೆಯೇ Case (ಮೊಕ್ಕದ್ದಮೆ) ನಿಜವೋ ಸುಳ್ಳೋ ಎಂದು ಕೇಳುತ್ತಿದ್ದರು. ಕಕ್ಷಿದಾರರು, 'ಮಾನ್ಯರೇ, ಸತ್ಯ, ಸುಳ್ಳು ಎರಡೂ ಸೇರಿದ್ದು' ಎಂದು ಹೇಳುತ್ತಿದ್ದರು. ಆಗ ಅವರು, 'ಹಾಗಾದರೆ ಆಗದು' ಎಂದುಬಿಡುತ್ತಿದ್ದರು. ತಮ್ಮ ಜೀವನವನ್ನೆಲ್ಲ ಹರಿದ ಅಂಗಿ ತೊಟ್ಟುಕೊಂಡೇ ಕಳೆದರು. ಅವರ ಮಾವನಾದರೋ ಡಂಗುರ ಸಾರಿಕೊಂಡೇ ಕೋರ್ಟಿಗೆ ಬರುತ್ತಿದ್ದರು.

''ವಿದ್ಯೆ ಎಂದರೆ, **'ಯಯಾ ತದಕ್ಷರಮಧಿಗಮ್ಯತೇ'** - ಯಾವ ವಿದ್ಯೆಯಿಂದ ಆ ಅಕ್ಷರಬ್ರಹ್ಮವನ್ನರಿಯಲು ಸಾಧ್ಯವೋ ಅದು. ಅದನ್ನು 'ಪರಾವಿದ್ಯೆ' ಎನ್ನುತ್ತಾರೆ. ಯಾವುದರಿಂದ ವಿಷಯವಾಸನೆಗಳು ಹೆಚ್ಚಾಗುತ್ತಾ ಹೋಗುತ್ತದೋ ಅದಕ್ಕೆ 'ಅವಿದ್ಯೆ' ಎನ್ನುತ್ತಾರೆ, ನಿನ್ನ ಈ ವಕಾಲತ್ತು ಇವುಗಳಲ್ಲಿ ಯಾವ ವಿದ್ಯೆಗೆ ಸೇರುತ್ತದೆ, ಹೇಳು?

''ಹ್ಯುಯೆನ್ ತ್ಸಾಂಗ್ ಎಂಥ ಅದ್ಭುತ ತ್ಯಾಗಿ, ಜ್ಞಾನಾನ್ವೇಷಕ! ಅವನದು ಅದೆಷ್ಟು keen observation (ತೀಕ್ಷ್ಣ ಪರಿಶೀಲನ ಶಕ್ತಿ) ! ಅವನೆಷ್ಟು ಕಷ್ಟಸಹಿಷ್ಣು! ಗೋಬಿ ಮರುಭೂಮಿಯನ್ನು ದಾಟಿ ಭಾರತಕ್ಕೆ ಬಂದ - ಬುದ್ಧನ ದೇಶ ತಾನೆ ನಮ್ಮದು! ಎಷ್ಟು ಪ್ರೀತಿ! ಭಾಗಲ್‌ಪುರ ಸಮೀಪ ಒಂದು ಬೌದ್ಧ ಸಭೆಯಲ್ಲಿ ಹೀನಯಾನ, ಮಹಾಯಾನಗಳು ಒಡೆದವು. ಹೀನಯಾನರ ಬುದ್ಧಮೂರ್ತಿ ಸಿಂಹಳ, ಬರ್ಮಾದಲ್ಲಿ; ಮಹಾಯಾನರ ಬುದ್ಧ, ಶಿವ ಹಾಗೂ ನಾನಾ ಮೂರ್ತಿಗಳು, ಧ್ಯಾನ-ನಿರ್ವಾಣಗಳು ಚೀನಾ ಹಾಗೂ ಟಿಬೆಟ್ಟಿನಲ್ಲಿ. ಇದೆಲ್ಲವೂ ಈ ಸಭೆಯ ಪ್ರಭಾವ. ಈ ಸಭೆಯ ನಂತರ ಹ್ಯುಯೆನ್ ತ್ಸಾಂಗ್ ಕಾಮರೂಪದಲ್ಲಿ ರಾಜನನ್ನು ಭೇಟಿಯಾದ. ಮತ್ತೆ ಪ್ರಯಾಗದಲ್ಲಿ ಶಿಲಾದತ್ಯ ಹರ್ಷವರ್ಧನನ ಮಹಾಯಜ್ಞದಲ್ಲಿ ಉಪಸ್ಥಿತನಿದ್ದ. ಅಲ್ಲಿನ 'ಸರ್ವದಕ್ಷಿಣ' ಯಜ್ಞದಲ್ಲಿ ಹರ್ಷವರ್ಧನನು ಒಂದು-ಒಂದೂವರೆ ತಿಂಗಳಲ್ಲಿ ತನ್ನ ಸರ್ವಸ್ವವನ್ನೂ ಹಂಚಿಬಿಡುತ್ತಿದ್ದ. ಸಂಗ್ರಹವಾದ ಬೊಕ್ಕಸ ಖಾಲಿಯಾಗುತ್ತಿತ್ತು. ಅಸ್ತ್ರಗಳನ್ನು ಬಿಟ್ಟು ಮಿಕ್ಕವೆಲ್ಲವನ್ನೂ ಹಂಚಿಬಿಡುತ್ತಿದ್ದರು. ಎಷ್ಟರ ಮಟ್ಟಿಗೆ ಎಂದರೆ ತಾನು ತೊಟ್ಟಿದ್ದ ವಸ್ತ್ರವನ್ನೂ ಸಹ. ಕೊನೆಗೆ ಅವನು ರಾಜಶ್ರೀಯ ಮನೆಗೆ ಹೋಗಿ ವಾಸಿಸಬೇಕಾಗುತ್ತಿತ್ತು. ಅವಳು ಕೊಟ್ಟ ಉಡುಗೆಗಳನ್ನು ತೊಟ್ಟು ಅವರೆಲ್ಲ ರಾಜಧಾನಿಗೆ ಹಿಂದಿರುಗುತ್ತಿದ್ದರು, ಬಹುಪಾಲು 'ಭಾಯಿಫೋಟಾ' ದಂತೆ *('ಭ್ರಾತೃದ್ವಿತೀಯಾ' - ಅಣ್ಣನ ಹಣೆಗೆ ಸೋದರಿಯರು ತಿಲಕವಿಡುವ ಹಬ್ಬ)* .

''Archeological Surveyಯಿಂದ ಅನೇಕ ವಿಷಯಗಳು ತಿಳಿದುಬರುತ್ತವೆ. Princeps, Wiiliam Jones, Alexander Cunningham - ಇವರೇ ಮೊದಲಿಗರು. ಆದರೆ 'Ashoka Pillar in Delhi built by Mohamad Tughlak'- (ದಿಲ್ಲಿಯ ಅಶೋಕಸ್ತಂಭವನ್ನು ಮಹಮದ್ ತುಗಲಕ್ ನಿರ್ಮಿಸಿದ ) ಎಂಬ ಮಾತು ಮಾತ್ರ ಹಾಸ್ಯಾಸ್ಪದ. Edicts decipher (ಶಾಸನಗಳ ಲಿಪೀಕರಣ) ಮಾಡಿ ಬ್ರಾಹ್ಮಣ ಪಂಡಿತರ ಗಣ - ಏನೊಂದೂ ಅರ್ಥವಾಗದ ಹೊಗಳುಭಟ್ಟರು ಅವರು - ಸಾಹೇಬರುಗಳಿಗೆ ಬೇಕಾದ ಹಾಗೆ ವ್ಯಾಖ್ಯಾನ ಮಾಡುತ್ತಾರೆ.

''ಹ್ಯುಯೆನ್ ತ್ಸಾಂಗ್‌ನ ಪುಸ್ತಕವನ್ನು ಕೈಯಲ್ಲಿಟ್ಟುಕೊಂಡೇ ಉತ್ಖನನ ಮಾಡುತ್ತಿದ್ದರು. ಮಥುರೆಯ ಸಂಘಾರಾಮದ ಅಳತೆಗೂ ಅವನ ದಾಖಲೆಗೂ ಸ್ವಲ್ಪವೂ ವ್ಯತ್ಯಾಸವಿಲ್ಲ. ಅದರಲ್ಲಿ 'ಲೀ' ಎಂದರೆ ಒಂದು league ಗೆ ಸಮಾನ. ಸಾರನಾಥದ ಬೌದ್ಧ ಮಠದ ಸ್ತೂಪ ಏನು ಅದ್ಭುತವಾಗಿತ್ತು! ಈಗ ಸರ್ಕಾರ ಅದನ್ನೇನು ಮಾಡಿದೆ ನೋಡಿ!

''ಬಂಕಿಮ ಬಾಬು, ರಮೇಶ ದತ್ತ - ಇವರೂ ಬಹಳ study (ಅಧ್ಯಯನ), research (ಸಂಶೋಧನೆ) ಮಾಡಿದ್ದಾರೆ. ಇವುಗಳ ಹೆಚ್ಚಿನ ಅಂಶವನ್ನು ಸಾಹೇಬರೇ ಪ್ರಕಾಶಕ್ಕೆ ತಂದರು. ಆದ್ದರಿಂದಲೇ ನಮಗೆ ಅವೆಲ್ಲ ತಿಳಿದಿವೆ. ಇದೆಲ್ಲ ಬಂಗಾಳಿಯಲ್ಲಿ translation (ಅನುವಾದ) ಮಾಡಿದರೆ, ಒಂದು ಒಳ್ಳೆಯ ಕಾರ್ಯವೂ ನಡೆದೀತು, ಸಂಪಾದನೆಯೂ ಆದೀತು. ಹಾಗೆ ಮಾಡದೆ, ಎಲ್ಲರೂ ವಕೀಲಿ ಹಾಗೂ ನೌಕರಿ ಮಾಡಿದರೆ ಹೇಗಾದೀತು?'' ಹ್ಯುಯೆನ್ ತ್ಸಾಂಗ್, ಫಾಹಿಯಾನ್ ಹಾಗೂ ಮಾರ್ಕೊ ಪೋಲೋ ಬಗ್ಗೆ ಅನೇಕ ವಿಚಾರಗಳನ್ನು ಬಾಬಾ ಉತ್ಸಾಹದಿಂದ ಹೇಳಿದರು.

ಸ್ವಲ್ಪ ಹೊತ್ತಿನ ನಂತರ ಅಖಂಡಾನಂದರು ಜನ್ಮದಿನಗಳ ಬಗ್ಗೆ ಹೇಳಿದರು: ''ಸಂನ್ಯಾಸಿಗಳಿಗೆ ಜನ್ಮದಿನವೇಕೆ? ಕಾಲಕ್ರಮದಲ್ಲಿ ೩೬೫ ದಿನಗಳೂ ತುಂಬುತ್ತವೆ! ಅದೂ ಸಾಕಾಗುವುದಿಲ್ಲ, ಈಗಲೇ ಕೆಲವರು ತಮ್ಮತಮ್ಮ ಜನ್ಮದಿನವನ್ನಾಚರಿಸಲು ಆರಂಭಿಸಿಬಿಡುತ್ತಾರೆ. ವೇದ , ಉಪನಿಷತ್ತುಗಳಲ್ಲೆಲ್ಲೂ ಇವೆಲ್ಲ ಇಲ್ಲ. ಇವು Aryan (ಆರ್ಯನ್ ಸಂಪ್ರದಾಯ) ಅಲ್ಲ ; ಅದು ಸಿಥಿಯನ್. ಮಹಾಭಾರತದಲ್ಲೆಲ್ಲೂ ರಾಮನವಮಿ ಅಥವಾ ಜನ್ಮಾಷ್ಟಮಿಯ ವಿಚಾರವಿಲ್ಲ. ಅದು ವೈಷ್ಣವರ ಸೃಷ್ಟಿ. ಬೌದ್ಧರನ್ನು ನೋಡಿ ಕಲಿತರು. ಅಣ್ಣ (ಮಹಾಪುರುಷ ಮಹಾರಾಜ್)ನೊಂದಿಗೆ ಈ ವಿಚಾರ ಪ್ರಸ್ತಾಪಿಸಿದ್ದೆ. ಅವರೂ ಈ ಅಭಿಪ್ರಾಯ ಸ್ವೀಕರಿಸಿದರು. ಸಂನ್ಯಾಸಿಗಳಿಗೆ ಜನ್ಮದಿನವೇಕೆ?''

**೨೬ ಜನವರಿ, ೧೯೩೭:** ೩-೪ ತಿಂಗಳ ಹಿಂದೆ ಸ್ವಾಮಿ ಅಖಂಡಾನಂದಜಿ ಮಹಾರಾಜರು Thacker Spink ನಿಂದ Beal ವರೆಗಿನ ಲೇಖಕರು ಬರೆದ ಹ್ಯುಯೆನ್ ತ್ಸಾಂಗ್ ನ ಒಂದು ಜೀವನ ಚರಿತ್ರೆಯನ್ನು ತರಿಸಿ, ತಮ್ಮ ಕಣ್ಣಿನಿಂದಲೇ ಓದುವುದು ಬಹಳ ಕಷ್ಟ

ವಾದರೂ ತುಂಬಾ ಆಸಕ್ತಿಯಿಂದ ಓದಿದರು. ಈ ವಿಷಯವಾಗಿ ಹೇಳಿದರು: ''ಓದುವುದೆ! ಅದೆಷ್ಟು ಓದಿದ್ದೇನೋ! ರಾತ್ರಿ ಯೋಚಿಸುತ್ತಿದ್ದೆ, ಯಾವಾಗ ಬೆಳಗಾಗುತ್ತದೋ ಎಂದು. ಅಯ್ಯೋ! ಈಗ ಮಾತ್ರ ಕಣ್ಣು ಕಾಣಿಸುತ್ತಿಲ್ಲ. ನೋಟ್ ಪುಸ್ತಕದಲ್ಲಿ ಎಷ್ಟು ವಿಷಯಗಳನ್ನು ಬರೆದಿದ್ದೆ! ಯಾರಾದರೂ ನೋಡುತ್ತಾರೆ, ಯಾರಾದರೂ ಓದುತ್ತಾರೆ ಎಂದು. ಆದರೆ ಹಾಗೆ ಓದುವವರು ಒಬ್ಬರೂ ಬರಲಿಲ್ಲ. ಉಪನಿಷತ್ತುಗಳನ್ನು ನನ್ನ ಕೈಯಿಂದಲೇ ಬರೆದುಕೊಂಡು, ಅದರ ನೋಟ್ಸ್ ಬರೆದು ಇಟ್ಟುಕೊಂಡಿದ್ದೇನೆ.''

ಇಂದು ರಾತ್ರಿ ಬಹರಂಪುರದ ಡಾಕ್ಟರು ಬಂದು ಬಾಬಾ ಅವರ ಕಣ್ಣುಗಳನ್ನು ಪರೀಕ್ಷಿಸಿದರು.

**೨೭ ಜನವರಿ, ೧೯೩೭:** ಬೆಳಗ್ಗೆ ಭಕ್ತನೊಬ್ಬ ಬಾಬಾಗೆ ಪ್ರಣಾಮ ಮಾಡಿ ಏಳುತ್ತಲೇ ಅವರು ಕೇಳಿದರು, ''ನೀನೇನು ಹಗಲೂರಾತ್ರಿ ಕನ್ನಡಕ ಧರಿಸಬೇಕೇ?'' ಭಕ್ತ ಹೇಳಿದ, ''ಹೌದು ಮಹಾಶಯರೇ, constant wear (ಸದಾ ಧರಿಸಿರಬೇಕು).'' ಬಾಬಾ ತಲೆಯಾಡಿಸಿ ಹೇಳಿದರು, ''Constant wear! ಏನೆಂದೆ, ಮಲಗಿರುವಾಗಲೂ ಕನ್ನಡಕ ಧರಿಸುತ್ತೀಯೇನು? ಕನಸು ಕಾಣಲು?'' ಅಲ್ಲಿದ್ದವರೆಲ್ಲರೂ ನಕ್ಕರು. ಬಾಬಾ ಮತ್ತೆ ಹೇಳಿದರು, ''ಮಹಾರಾಜ್ (ಸ್ವಾಮಿ ಬ್ರಹ್ಮಾನಂದರು) ಹೇಳುತ್ತಿದ್ದರು, ''ಯಾವಾಗಲೂ ಕನ್ನಡಕ ಧರಿಸುವುದರಿಂದಲೇ ಕಣ್ಣುಗಳು ಹಾಳಾಗುವುವು'' ಅಂತ.

ಬಾಬಾ ಇಂಜಿನಿಯರ್ ಒಬ್ಬನೊಡನೆ ಮಾತನಾಡುತ್ತಿದ್ದಾರೆ. ''ನಾವು ಕಲಿಯಲೆಂದೇ ಬಂದಿದ್ದೇವೆ. ಚಿಕ್ಕಂದಿನಲ್ಲಿ ೧೩-೧೪ ವರ್ಷವಿದ್ದಾಗ ಪರಮಹಂಸದೇವರ ಬಳಿಗೆ, ಠಾಕೂರರ ಬಳಿಗೆ ಹೋಗಿದ್ದೇನೆ. ಅಂದಿನಿಂದ ಹಿಡಿದು ಈ ಹಳ್ಳಿಯ ಮುಖಂಡನವರೆಗೆ ನನಗೆ ಎಷ್ಟೊಂದು ವಿಷಯಗಳನ್ನು ಕಲಿಸಿ ಹೋಗುತ್ತಾರೆ! ಬೇಸಾಯ, ಜಮೀನು ವಿಚಾರ, ಇಗಲೂ ಎಷ್ಟು ಕಲಿಯುತ್ತಿದ್ದೇನೆ!

''ಪೂರ್ವಜನ್ಮದ ಅನೇಕ ಸತ್ಕರ್ಮ, ಸಂಸ್ಕಾರಗಳಿಲ್ಲದಿದ್ದರೆ ನಿಜವಾದ ವೈರಾಗ್ಯ ಉಂಟಾಗದು. ಸ್ಮಶಾನ ವೈರಾಗ್ಯ, ಮರ್ಕಟ ವೈರಾಗ್ಯಗಳಿಂದ ಏನೂ ಪ್ರಯೋಜನವಿಲ್ಲ; ಅವು ಎರಡು ದಿನ ಮಾತ್ರ; ಯಾರಾದರೂ ಏನಾದರೂ ಹೇಳಿಬಿಟ್ಟರೆ ವೈರಾಗ್ಯ ಹೋಗಿಬಿಡುವುದು. ಮತ್ತೆ ಎಂದಿನಂತೆಯೇ! ನಾವು ಠಾಕೂರರ ಆಶ್ರಯದಲ್ಲಿದ್ದೇವೆ, ನಮ್ಮ ಅಂತರಂಗದಲ್ಲಿ ಕಳ್ಳತನವಿಲ್ಲ.

''ನೋಡು ಎಲ್ಲವನ್ನೂ - ಭಗವಂತನ ಶಕ್ತಿಯಿಂದ ದೇಶಕ್ಕಾಗಿ, ಲೋಕಕಲ್ಯಾಣಕ್ಕಾಗಿ ದುಡಿಯುವವರು ತಮ್ಮ ನಿರ್ದಿಷ್ಟ ಕಾರ್ಯ ಮುಗಿಯುವ ತನಕ ನಿಲ್ಲುವುದಿಲ್ಲ - ಆಯಾಸವಿಲ್ಲದೆ ಕೆಲಸ ಮಾಡುತ್ತಾರೆ. ಆದರೆ ಕೆಲಸ ಮುಗಿದ ಕೂಡಲೇ ಹೊರಟು ಹೋಗುತ್ತಾರೆ. ಸ್ವಾಮೀಜಿ ಜ್ವಲಂತ ಜೀವನವೇ ಇದಕ್ಕೆ ಉದಾಹರಣೆ. ಇಲ್ಲೇ ನೋಡಿ. ಸತತ ೪೦ ವರ್ಷ ಕಳೆದವು. ಇದು ಯಾರ ಶಕ್ತಿ ಹೇಳು?''

ಸಂಜೆ ಬಾಬಾ ತಮ್ಮಲ್ಲೇ ಹೇಳಿಕೊಳ್ಳುತ್ತಿದ್ದಾರೆ:

**ಅನಂತಪಾರಂ ಕಿಲ ಶಬ್ದಶಾಸ್ತ್ರಂ ।**
**ಸ್ವಲ್ಪಂ ತಥಾಯೂರ್ವಹವಶ್ಚ ವಿಘ್ನಾಃ ॥**
**ಸಾರಂ ತತೋ ಗ್ರಾಹ್ಯಮಪಾಸ್ಯ ಫಲ್ಗು ।**
**ಹಂಸೈರ್ಯಥಾ ಕ್ಷೀರಮಿವಾಂಬು ಮಧ್ಯಾತ್॥**

''ಬಾಲ್ಯದಲ್ಲಿ ನಾನು ಶಾಲೆಯಿಂದ ಓಡಿಹೋದ ಸ್ನೇಹಿತರೊಡನೆ ಹೋಗಿದ್ದೆ. ಎಲ್ಲರೂ ಒಟ್ಟು ಸೇರಲೆಂದು ಅವರೆಲ್ಲ ಚಂದಾ ಎತ್ತಿ, ಒಂದು ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದರು. ಅಲ್ಲಿ ಅವರೆಲ್ಲ ಅದೇನೇನೋ ಸೇವಿಸುತ್ತಿದ್ದರು. ನಂತರ ೪ ಗಂಟೆಗೆ ಪುಸ್ತಕಗಳನ್ನು ತೆಗೆದುಕೊಂಡು ಮನೆಗೆ ಮರಳುತ್ತಿದ್ದರು. ನನ್ನಿಂದ ಒಂದು ದಿನವಾದರೂ, ಒಂದು ಚುರುಟನ್ನೂ ಸೇದಿಸಲೂ ಅವರಿಂದಾಗಲಿಲ್ಲ. ಸೇದಲು ಎಷ್ಟೋ ಬಾರಿ ಹೇಳುತ್ತಿದ್ದರು. ನಾನು ಅವರ ಭಾವವನ್ನೆಲ್ಲಾ ನೊಡುತ್ತಿದ್ದೆ. ಒಂದು ದಿನ ಅವರು 'ಧಾನ್ಯೇಶ್ವರಿ' (ಅಕ್ಕಿ, ಯವೆ ಧಾನ್ಯದಿಂದ ತಯಾರಿಸಿದ ಮದ್ಯ) ಕುಡಿದು ಮತ್ತರಾಗಿ ಒಬ್ಬರನ್ನೊಬ್ಬರು ಬಯ್ಯುತ್ತಿದ್ದರು... ನಂತರ ಇಬ್ಬರು ಸ್ನೇಹಿತರಿಗೆ ಪ್ರಜ್ಞೆ ತಪ್ಪಿತು. ರಾತ್ರಿಯಾಯಿತು. ಎರಡೂ ಕೈಗಳಿಂದ ಅವಬ್ಬರನ್ನೂ ಹಿಡಿದುಕೊಂಡು ಮನೆಗೆ ತಲುಪಿಸಿದೆ. ಸುಮಾರು ಒಂದೂವರೆ ಮೈಲಿ ರಸ್ತೆ. ಅನಂತರ ಅಲ್ಲಿಗೆ ನಾನು ಹೋಗಲಿಲ್ಲ. ಚಿಕ್ಕಂದಿನಲ್ಲಿ ಸ್ನೇಹಿತರ ಸಹವಾಸದಿಂದ ಅನೇಕರು ಕೆಡುತ್ತಾರೆ. ಅದರೆ ಪೂರ್ವ ಸಂಸ್ಕಾರಗಳು ಒಳ್ಳೆಯದಾಗಿದ್ದರೆ ಬದುಕಿಕೊಳ್ಳುತ್ತಾರೆ.

''ರಾಮಾಯಣ-ಮಹಾಭಾರತ ಕೇಳಿ, ಓದಿದಾಗ 'ತಪೋವನಗಳೆಷ್ಟು ರಮಣೀಯ!' ಎಂದೆನಿಸುತ್ತಿತ್ತು. ನಾನು ಅಲ್ಲಿಗೆ ಹೋದಂತೆ ಭಾವಿಸುತ್ತಿದ್ದೆ - ಎಲ್ಲಡೆ ಮರಗಿಡಗಳು, ಹೂವು ಹಣ್ಣುಗಳು, ಹಸಿರು ಭೂಮಿಯ ಮೇಲೆ ಜಿಂಕೆಗಳು ಓಡಾಡುತ್ತಿವೆ, ಹಕ್ಕಿ ಗಳು ಹಾಡುತ್ತಿವೆ. ಎಷ್ಟೊಂದು ಮಂದಿ ಋಷಿಮುನಿಗಳು ಧ್ಯಾನಿಸುತ್ತಿದ್ದಾರೆ!

''ಆಗಿನಿಂದಲೇ ಸಾಧುಗಳನ್ನು ನೋಡಿದಾಗಲೆಲ್ಲ ಅವರ ಹಿಂದೆ ಓಡಿಹೋಗುತ್ತಿದ್ದೆ. 'ಎಲ್ಲಿಂದ ಬಂದಿದ್ದೀರಿ? ಎಲ್ಲೆಲ್ಲಿಗೆ ಹೋಗುವಿರಿ?' ಎಂದು ಕೇಳಿದಾಗ ಅವರು, 'ಹಿಮಾಲಯ, ಹರಿದ್ವಾರ' ಎಂದು ಉತ್ತರಿಸುತ್ತಿದ್ದರು. (ಆ ಸ್ಥಳಗಳು) ಹೇಗಿರುತ್ತವೆ? ಎಲ್ಲಿವೆ? ಎಂದು ಭಾವಿಸುತ್ತಿದ್ದೆ. ಹಿಮಾಲಯ, ಗಂಗಾನದಿ, ಕೈಲಾಸಗಳನ್ನು ಭಾವಿಸುತ್ತಿದಂತೆಲ್ಲ ಮೌನ ತಾಳುತ್ತಿದ್ದೆ.

''ಒಂದೊಂದು ದಿನ ಸಾಧುಗಳನ್ನು ಹಿಂಬಾಲಿಸುತ್ತಿದ್ದೆ. ನಾನು ಚಿಕ್ಕವನೆಂಬ ಭಯದಿಂದ ಅವರು ನನ್ನನ್ನು ಜೊತೆಗೆ ಸೇರಿಸಿಕೊಳ್ಳುತ್ತಿರಲಿಲ್ಲ. ಆ ವಯಸ್ಸಿನಲ್ಲಿ ಹೊಸ ಸಾಧುಗಳೊಬ್ಬರು ಬಂದಿದ್ದಾರೆಂದು ತಿಳಿದಾಗಲೆಲ್ಲ ಅವರನ್ನು ನೋಡಲು ಎಷ್ಟು ದೂರ ಹೋಗುತ್ತಿದ್ದೆ! ಒಮ್ಮೆ ಚಿತ್‌ಪುರದ ಸರ್ವಮಂಗಳೆಯ ದೇವಸ್ಥಾನದ ಹತ್ತಿರ, ಒಮ್ಮೆ ನಾರಿಕೇಲಡಾಂಗಾದ ಸೇತುವೆ ದಾಟಿ, ಕಾಂಕೂರಗಾಛಿಯ ಹತ್ತಿರ, ನಾವಿಬ್ಬರು ಸ್ನೇಹಿತರು ಸಾಧುಗಳನ್ನು ನೋಡಲೆಂದು ಹೋಗಿದ್ದೆವು. ಆದರೆ ಈ ರೀತಿ ಬಹಳ ದಿನ ಸುತ್ತಾಡಬೇಕಾಗಲಿಲ್ಲ. ಠಾಕೂರರೇ ನನ್ನನ್ನು ಸೆಳೆದುಕೊಂಡರು. ನಾನು ಠಾಕೂರರನ್ನು ಪಡೆದೆ. ಠಾಕೂರರು ಹಾಗೂ ಸ್ವಾಮೀಜಿ ಸಿಕ್ಕಿದಾಗ ಎಲ್ಲರೂ ಸಿಕ್ಕಿದಂತಾಯಿತು.

ಹೊಸದಾಗಿ ಬಂದಿದ್ದ ಯುವಕನಿಗೆಂದರು: ''ಈಗ ನನ್ನ ಅಂತರ್ಯದಲ್ಲಿ ನಿನಗೊಂದು ಸ್ಥಾನವಾಯಿತು. ಇಲ್ಲವಾದರೆ,

ಎಲ್ಲರೂ ಬರುತ್ತಾರೆ, ಹೋಗುತ್ತಾರೆ; ಜ್ಞಾಪಕವಿರುವುದಿಲ್ಲ. ಠಾಕೂರರು ಯಾರನ್ನಿಲ್ಲಿಗೆ ಕರೆತಂದಿದ್ದಾರೊ, ಅವರಿಗಾಗಿ ಪ್ರಾರ್ಥಿಸಬೇಕು – ಯಾರು ಕಣ್ಣ ಮುಂದೆ ಇರುವರೋ, ಯಾರು ದೂರದಲ್ಲಿರುವರೋ ವಿಶೇಷವಾಗಿ ಅವರಿಗೋಸ್ಕರ. ಈ ಹುಡುಗರೆಲ್ಲ ಸಂನ್ಯಾಸಿ, ಅವಧೂತ, ಪರಮಹಂಸ ಗುರುಗಳ ಸಮೀಪ ಇದ್ದರೂ ಅವರಿಗೆ ವೈರಾಗ್ಯ ಉಂಟಾಗುತ್ತಿಲ್ಲ. ಏನು ಮಾಡುವುದು? ನಮಗೆ ಪೂರ್ವ ಜನ್ಮದ ಸಂಸ್ಕಾರವಿತ್ತು, ಬದುಕಿಕೊಂಡೆವು.

''ಎಷ್ಟೊಂದು ರೀತಿಯ ವೈರಾಗ್ಯಗಳು ಬರುತ್ತವೆ! ತುಲಸೀದಾಸರು ಅಳತ್ತಾ ಪಲ್ಲಕ್ಕಿಯ ಹಿಂದೆಯೇ ಹೊರಟಿದ್ದಾರೆ, ತಮ್ಮ ಹೆಂಡತಿಯ ತಂದೆಯ ಮನೆಗೆ. ಹೆಂಡತಿಗೆ ನಾಚಿಕೆ. ಆಕೆ ತಿರಸ್ಕಾರದಿಂದ ನುಡಿದಳು 'ನಿಮಗೆ ನಾಚಿಕೆಯಿಲ್ಲವೆ? ಅಯ್ಯೋ! ನಿಮಗೆ ನನ್ನ ರಕ್ತ–ಮಾಂಸಗಳ ಮೇಲಿದ್ದಷ್ಟು ಪ್ರೀತಿಯನ್ನು ಭಗವಂತನಾದ ರಾಮಚಂದ್ರನಿಗೆ ಕೊಟ್ಟಿದ್ದರೆ ಎಷ್ಟೋ ಮೇಲಾಗಿರುತ್ತಿತ್ತು.' ಕೊನೆಗೆ ತುಲಸೀದಾಸರು ಹಿಂದಿರುಗಿದರು. ಆಸಕ್ತಿಯಿಂದ ವೈರಾಗ್ಯದತ್ತ!

''ಬಿಲ್ವಮಂಗಲನಿಗೆ ಚಿಂತಾಮಣಿ ವೇಶ್ಯೆಯ ಮೇಲೆ ಎಂಥ ಆಕರ್ಷಣೆ! ಪಿತೃಶ್ರಾದ್ಧವನ್ನೂ ಮುಗಿಸದೆ ಬಿರುಗಾಳಿಯಲ್ಲೇ, ತೇಲುತ್ತಿದ್ದ ಹೆಣವನ್ನು ಹಿಡಿದುಕೊಂಡು ನದಿ ದಾಟಿ, ಹಾವನ್ನು ಹಿಡಿದು ಗೋಡೆ ಹಾರಿ, ಇಂಥ ವಿಷಮ ಪರಿಸ್ಥಿತಿಯಲ್ಲೂ ರಾತ್ರಿ ಹಾಜರು! ಚಿಂತಾಮಣಿ ಮೊದಲು ಕೋಪಗೊಂಡರೂ, ನಂತರ ಕರುಣೆಯಿಂದ ಹೇಳಿದಳು: 'ಅಯ್ಯೋ! ಈ ಆಕರ್ಷಣೆಯ ಒಂದು ಕಣವಾದರೂ ಕೃಷ್ಣನ ಮೇಲೆ ನಿನಗಿರುತ್ತಿದ್ದರೆ!' ಆ ಒಂದು ಮಾತಿಗೇ ಅವನು ಮನೆಬಿಟ್ಟು ನಡೆದ. ಈ ರೀತಿ ಅತ್ಯಂತ ವಿರಳ.

''ಶೇಖ್ ಸಾದಿ ಬಾವಿಯ ಬದಿಯಲ್ಲಿ ಕುಳಿತು ನೋಡುತ್ತಿದ್ದಾನೆ, ಹಗ್ಗ ಕಲ್ಲಿಗೆ ತಿಕ್ಕಿ, ಕಲ್ಲು ಸವೆದು ತುಂಡಾಗಿ ಹೋಗುತ್ತಿದೆ. ಆಗಲೇ ಅವನಿಗೆ ಪ್ರೇರಣೆಯುಂಟಾಯಿತು. 'ಏನು! ಸಂಸಾರ ಬಂಧನ ಕಡಿಯುವುದಿಲ್ಲವೆ?' ಅಂತ.

''ಒಬ್ಬಾತ ರಾಜ ಒಬ್ಬ ಸಂನ್ಯಾಸಿಯನ್ನು ಕೇಳುತ್ತಾನೆ, 'ಸಂಸಾರ ಬಂಧನ ಹೇಗೆ ಕಳೆದುಹೋಗುತ್ತದೆ?' ಅಂತ. ಸಂನ್ಯಾಸಿ ಅರಮನೆಯ ಗೋಡೆಯ ಬಳಿಗೆ ರಾಜನನ್ನು ಕರೆದುಕೊಂಡು ಹೋಗಿ ಅವನಿಗೆ ಹೇಳಿದ, 'ಕಂಬವನ್ನು ಹಿಡಿದುಕೋ.' ರಾಜ ಕಂಬವನ್ನು ಗಟ್ಟಿಯಾಗಿ ಹಿಡಿದುಕೊಂಡ. ಆಗ ಸಂನ್ಯಾಸಿ, 'ಬಿಟ್ಟುಬಿಡು' ಎಂದ. ರಾಜ ಕಂಬವನ್ನು ಬಿಟ್ಟುಬಿಟ್ಟ. ಆಗ ಸಂನ್ಯಾಸಿ ಹೇಳಿದ, 'ಸಂಸಾರವೂ ಹೀಗೆಯೇ; ಬಿಟ್ಟುಹೋಗುತ್ತದೆ.'

''ಠಾಕೂರರು ಹೇಳುತ್ತಿದ್ದರು: 'ಯಾರಾದರೂ ಸಾಧುಗಳಾಗಬಲ್ಲರೇನು? ಇಲ್ಲ; ಯಾರಾದರೂ ತಾಳೆಯ ಮರದಿಂದ ಕೈಕಾಲುಗಳನ್ನು ಬಿಟ್ಟು ಕೆಳಗೆ ಹಾರಬಲ್ಲರೇನು?' ಸಾಧುವಾಗುವುದೆಂದರೆ ಅದೇನು ಸುಲಭದ ಮಾತೆ? ಅದಕ್ಕೆ ಎಂಥ ಸಾಹಸ ಬೇಕು, ಎಷ್ಟೊಂದು ಧೈರ್ಯವಿರಬೇಕು! ಭಗವಂತನ ಮೇಲೆ ಸಂಪೂರ್ಣ ಅವಲಂಬನೆ ಹೊಂದಿರಬೇಕು, ಆತನಿಗಾಗಿ ತನ್ನ ಸರ್ವಸ್ವವನ್ನೂ ತ್ಯಾಗ ಮಾಡಬೇಕು.''

ಸ್ವಾಮಿ ಪರಮಾನಂದರಿಗೆ ಪರಿಚಿತರಾದ ಮಿಸ್ಟರ್ ಫಿಲಿಪ್ (ಬ್ರಹ್ಮಚಾರಿ ಪರಮ ಚೈತನ್ಯ) ಕ್ಯಾಲಿಫೋರ್ನಿಯದ ಆನಂದಾಶ್ರಮದಿಂದ ಬಂದಿದ್ದಾನೆ. ಆತ ಬಹಳ ಆನಂದಭರಿತನಾಗಿದ್ದಾನೆ. ಕೆಲಸ ಹಾಗೂ ಜಪಧ್ಯಾನಗಳಿಂದ ಜೀವನ ಪಥದಲ್ಲಿ ಮುಂದೆ ಸಾಗುತ್ತಿದ್ದಾನೆ. ಸ್ವಾಮಿ ಪರಮಾನಂದರು ಅಮೆರಿಕಾಗೆ ಹಿಂದಿರುಗಲು ಅವನಿಗೆ ಪತ್ರ ಬರೆದಿದ್ದಾರೆ. ಬಾಬಾ ಕೂಡ ಬ್ರಹ್ಮಚಾರಿಯಿಂದ ಅಮೆರಿಕದ ಬಗ್ಗೆ ಅನೇಕ ವಿಚಾರಗಳನ್ನು ಕೇಳಿ ತಿಳಿದುಕೊಂಡಿದ್ದಾರೆ. ಈ ಬಗ್ಗೆ ಸ್ವಾಮಿ ಪರಮಾನಂದರಿಗೆ ಬಾಬಾ ಒಂದು ಪತ್ರ ಬರೆಸಿದರು.

''ಪ್ರೀತಿಯ ಪರಮಾನಂದ,

ನೀವುಗಳು ೩೦ ವರ್ಷಗಳಿಂದ ಅಮೆರಿಕಾದಲ್ಲಿ ಕೆಲಸವನ್ನು ಮಾಡುತ್ತಿದ್ದೀರಿ. ಸ್ವಾಮೀಜಿ ಅಲ್ಲಿ ಮಾಡಿದ ಕಾರ್ಯದ ನಂತರ ನೀವು ಹೊಸದಾಗಿ ಏನನ್ನಾದರೂ ಸಾಧಿಸಿದ್ದೀರೆಂದು ಹೇಳಬಲ್ಲೆಯಾ? ಅಲ್ಲಿನ ಸಮಾಜ, ಜೀವನವನ್ನು ನಿಮ್ಮಿಂದ ಸ್ಪರ್ಶಮಾಡಲಾಗಿದೆಯೆ? ಸ್ವಾಮೀಜಿ, exchange of ideas - exchange of men (ಭಾವನೆಗಳ ವಿನಿಮಯ, ವ್ಯಕ್ತಿಗಳ ವಿನಿಮಯ) ಇದನ್ನೇ ಬಯಸಿದ್ದರು. ಅವರು ಸ್ವತಃ ೩–೪ ಮಂದಿಯನ್ನು ಆ ದೇಶಕ್ಕೆ ಕಳುಹಿಸಿದ್ದರು. ಅನಂತರ? ನಾವಾದರೋ ನಮ್ಮ ಸುಮಾರು ೨೦ ವಿದ್ವಾಂಸರೂ, ಬುದ್ಧಿವಂತರೂ ಆದ ಯುವಕರನ್ನು ಆ ದೇಶದ ಸೇವೆಗಾಗಿ ಕಳುಹಿಸಿದ್ದೇವೆ; ಅದಕ್ಕೆ ಅನುಪಾತವಾಗಿ ಆ ದೇಶ ಇಲ್ಲಿಗೆ ಎಷ್ಟು ಜನರನ್ನು ಕಳುಹಿಸಿಕೊಟ್ಟಿದೆ? ಅದಲ್ಲದೆ ಪರಮ ಚೈತನ್ಯನು ಇಲ್ಲಿದ್ದು ಕೆಲಸಮಾಡಿದರೆ, ಅದರಿಂದ ತೊಂದರೆಯಾದರೂ ಏನು? ಅವನು practical ಹಾಗೂ ಇಂಜಿನಿಯರ್. ಈ ದೇಶಕ್ಕೆ ಅಂತಹವರಿಂದಲೇ ಉಪಯೋಗ.

''ಇನ್ನೊಂದು ಮಾತನ್ನು ಅವನಿಂದ ಕೇಳಿದ್ದೆ, ಅಮೆರಿಕ ಎಂದರೆ ದೊಡ್ಡ ಮನುಷ್ಯರು ಎಂದಲ್ಲ; ಅಲ್ಲಿಯೂ ಬಡವರಿದ್ದಾರೆ, ಅವರ ಕಷ್ಟ, ಸಂಕಟ, ಅಭಾವಗಳೂ ವಿಪರೀತ. ಅವರ ಕಣ್ಣಿನಲ್ಲಿ ನೀರಿದೆ. ಕೆಲಸವಿಲ್ಲದಿದ್ದರೆ ನಿರಾಹಾರದಿಂದ ದಿನಗಳನ್ನು ಕಳೆಯಬೇಕು, ಚಳಿಗಾಲದಲ್ಲಿ ಕೋಣೆಯ ಸಂದುಗಳಿಂದ ಬೀಸಿ ಬರುವ ಮೈ ಕೊರೆಯುವ ಶೀತಲಗಾಳಿ ಜೀವನವನ್ನು ದಾರುಣವಾಗಿಸುತ್ತದೆ. ಈ ಸಂಬಂಧವಾಗಿ ನೀವೇನಾದರೂ ಮಾಡಿದ್ದೀರೇನು? ನನಗನಿಸುತ್ತದೆ, ನಾನೇನಾದರೂ ಆ ದೇಶಕ್ಕೆ ಹೋಗಿದ್ದರೆ ಅವರ ನಡುವೆ ಕೆಲಸವನ್ನು ಮಾಡುತ್ತಿದ್ದೆ, ಅಲ್ಲಿಯೂ ಇಂತಹ ಸೇವೆಯಲ್ಲೇ ಮುಳುಗುತ್ತಿದ್ದೆ. ಇತಿ ನಿನ್ನ –''

*(ಮುಂದುವರಿಯುವುದು)*

''ಒಳ್ಳೆಯವನಾಗು. ನಾನು ತೃಣಮಾತ್ರದವನು ಎಂಬ ನಮ್ರತೆ ನಿನ್ನಲ್ಲಿರಲಿ. ವೃಕ್ಷದಂತೆ ಸಹನಶೀಲನಾಗಿರು. ಭಕ್ತನೆಂದರೆ ಅಹಂಕಾರವನ್ನು ಸಂಪೂರ್ಣ ನಾಶ ಮಾಡಿಕೊಂಡಿರಬೇಕು. ಸ್ವತಃ ಭಗವಂತನೇ ಸರ್ವರಲ್ಲೂ ಇದ್ದಾನೆ ಎಂದು ಅವನು ಕಂಡುಕೊಳ್ಳಬೇಕು. ಯಾರು ಪರಮಾತ್ಮನ ನಾಮೋಚ್ಚಾರಣೆ ಮಾಡುತ್ತಿರುತ್ತಾರೋ ಅವರು ಅವನ ಪ್ರೀತಿಗೆ ಪಾತ್ರರಾಗುತ್ತಾರೆ.''

*– ಚೈತನ್ಯ ಮಹಾಪ್ರಭು*

ಜಪಾನಿನ ಕಥೆಗಳು

# ಮುಗಿಲು ಮುಟ್ಟಿದ ಬಿದಿರು ಗಿಡ

ಬಂಗಾಳಿ ಮೂಲ : ರಾಜಕೃಷ್ಣ ಭಟ್ಟಾಚಾರ್ಯ ಚಿತ್ರ : ಬುಂಕೋ ಭಟ್ಟಾಚಾರ್ಯ ಕನ್ನಡಾನುವಾದ : ಗಿರಿಜಾದೇವಿ



ಇದೊಂದು ಬಹಳ ಹಿಂದಿನ ಕಥೆ. ಒಂದು ಗುಂಪು ಪುಂಡ ಹುಡುಗರು ನಾನಾ ರೀತಿಯ ಕೀಟಲೆಗಳನ್ನು ಮಾಡುತ್ತಾ ತಿರುಗಾಡಿ ಕೊಂಡಿದ್ದರು. ಕುಚೇಷ್ಟೆಗಳನ್ನು ಮಾಡುತ್ತಾ ಇತರರನ್ನು ಪೀಡಿಸು ವುದೇ ಅವರ ಕೆಲಸವಾಗಿತ್ತು. ಹೀಗೇಕೆ ಎಂದರೆ, ಅವರಿಗೆ ಬೇರೆ ಯಾವ ಕೆಲಸವೂ ಇರಲಿಲ್ಲ. ಒಂದು ದಿನ ಅವರು ಒಂದು ಇಲಿ ಯನ್ನು ಹಿಡಿದು ತಂದು, ಅದಕ್ಕೆ ವಿಪರೀತ ಹಿಂಸೆ ಕೊಡುತ್ತಿದ್ದರು. ಅದು ಪ್ರಾಣಸಂಕಟದಿಂದ ಒದ್ದಾಡುತ್ತಿದ್ದರೆ, ಹುಡುಗರೆಲ್ಲರೂ ಆನಂದದಿಂದ ಕೇಕೆ ಹಾಕಿ ಕುಣಿಯುತ್ತಿದ್ದರು. ಇದೊಂದು ಮನ ರಂಜನೆಯ ಆಟ ಅವರಿಗೆ.

ಇಲಿಯ ಈ ದುರವಸ್ಥೆಯನ್ನು ಕಂಡು ಮನನೊಂದ ಕರುಣಾಳು ಮುದುಕ ಆ ಹುಡುಗರಿಗೆ ಬುದ್ಧಿಮಾತು ಹೇಳುತ್ತಾ ಹೀಗೆಂದ, ''ಅಪ್ಪಾ ಮಕ್ಕಳಿರಾ, ಹೀಗೆ ಮಾಡಬೇಡಿ. ಇಲಿಗೆ ಹಿಂಸೆಯಾಗುತ್ತದೆ. ಅದನ್ನು ಬಿಟ್ಟುಬಿಡಿ.'' ಮುದುಕನ ಮಾತು ಕೇಳಿದ ಹುಡುಗರು ಇಲಿಯನ್ನು ಬಿಟ್ಟುಬಿಟ್ಟರು. ಹುಡುಗರ ಕಾಟದಿಂದ ಪಾರಾದ ಇಲಿ ಬದುಕಿಕೊಂಡಿತು. ಸಂತೋಷಗೊಂಡ ಇಲಿ, ತನ್ನ ಕೃತಜ್ಞತೆಯ ಸಂಕೇತವಾಗಿ ಮುದುಕನಿಗೆ ಒಂದು ಬಿದಿರು ಮರದ ಚಿಕ್ಕ ಸಸಿಯನ್ನು ಕೊಡುತ್ತಾ ಹೇಳಿತು, ''ಇದನ್ನು ನಿನ್ನ ತೋಟದಲ್ಲಿ ನೆಡು.'' ಮುದುಕ ಹಾಗೆಯೇ ಮಾಡಿದ. ಗಿಡವನ್ನು ನೆಟ್ಟ ಮರುದಿನದಿಂದಲೇ ಅದು ಬರಬರನೆ ಬೆಳೆಯುವುದಕ್ಕೆ ಪ್ರಾರಂಭವಾಯಿತು. ಬೆಳೆಯುತ್ತಾ ಬೆಳೆ ಯುತ್ತಾ ಅದು ಎಷ್ಟು ಉದ್ದವಾಯಿತೆಂದರೆ, ಮೋಡಗಳ ಮಧ್ಯೆ ಸೇರಿಹೋದಂತೆ ಕಾಣುತ್ತಿತ್ತು. ಈ ವಿಚಿತ್ರ ಕಂಡು ಮುದುಕನಿಗೆ ಒಂದೇ ಅಚ್ಚರಿ! ಇಷ್ಟು ಮಾತ್ರವಲ್ಲ , ಅವನಿಗೆ ಮತ್ತೂ ಒಂದು ಆಶ್ಚರ್ಯ ಕಾದಿತ್ತು. ಒಂದು ದಿನ ಬಿದಿರಿನ ಒಳಗಿನಿಂದ ಝಣಝಣ ಶಬ್ದ ಬರುತ್ತಿರುವಂತೆ ಮುದುಕನಿಗೆ ಭಾಸವಾಯಿತು. ಇದೇನು ಈ ಶಬ್ದ ಎಂದು ತಿಳಿದುಕೊಳ್ಳುವ ಕುತೂಹಲದಿಂದ ಮುದುಕ ಬಿದಿರಿನ ಕೆಳಭಾಗದಲ್ಲಿ ಸ್ವಲ್ಪ ಸೀಳಿದ. ಅವನು ಹಾಗೆ ಸೀಳಿದ್ದೇ ತಡ, ಬಿದಿರಿನ ಒಳಗಿನಿಂದ ಚಿನ್ನದ ನಾಣ್ಯಗಳು ಹೊರಬರಲು ಪ್ರಾರಂಭವಾಗಿ ಬಿಟ್ಟಿತು! ಮುದುಕನ ಆನಂದ ವರ್ಣಿಸಲಾಗದು.

ಮುದುಕನ ತೋಟದಲ್ಲಿ ನಡೆದ ಈ ಘಟನೆಗಳನ್ನೆಲ್ಲ ಅವನ ಪಕ್ಕದ ಮನೆಯ ಮತ್ತೊಬ್ಬ ಹೊಟ್ಟೆಕಿಚ್ಚಿನ ಮುದುಕ ಗಮನಿಸುತ್ತಿದ್ದ. ಇವನಿಗೆ ಅಗಲವಾದ ಕೆಂಪು ಕೂದಲಿನ ಗಡ್ಡ ಇತ್ತು ಮತ್ತು ತಲೆ ಕೂದಲೂ ಕೆಂಪಾಗಿತ್ತು. ತನ್ನ ಕೆಂಪು ಗಡ್ಡವನ್ನು ಅತ್ತಿತ್ತ ಅಲುಗಾಡಿ ಸುತ್ತಾ ಮುದುಕನನ್ನು ವಿಚಾರಿಸಿದ, ''ಎಲ್ಲಿಂದ ತಂದೆ ಈ ಬಿದಿರು ಗಿಡವನ್ನು?'' ಸರಳ ಮನಸ್ಸಿನ ಈ ಮುದುಕ ಬಿದಿರು ಗಿಡದ ಕತೆ ಎಲ್ಲ ವನ್ನೂ ವಿವರಿಸಿ ಹೇಳಿದ. ಕೆಂಪುಗಡ್ಡದ ಮುದುಕ ಅದೇ ಇಲಿಯನ್ನು ಹಿಡಿದು ಕೇಳಿದ, ''ನನಗೂ ಒಂದು ಬಿದಿರು ಸಸಿ ಕೊಡು. ಇಲ್ಲದಿದ್ದರೆ ನಿನ್ನನ್ನು ಸಾಯಿಸುತ್ತೇನೆ.'' ಇಲಿ ಬೇರೆ ದಾರಿ ಕಾಣದೆ ಅವನಿಗೂ ಒಂದು ಬಿದಿರು ಸಸಿ ಕೊಟ್ಟಿತು. ಗಿಡವನ್ನು ಪಡೆದು ಅತಿಯಾಗಿ ಆನಂದಿತನಾದ ಕೆಂಪು ಗಡ್ಡದವನು, ಅದನ್ನು ತನ್ನ ತೋಟದಲ್ಲಿ ನೆಟ್ಟ. ಕೇವಲ ಎರಡೇ ದಿನಗಳಲ್ಲಿ ಬಿದಿರು ಗಿಡ ಬೆಳೆದು ಮೋಡಗಳನ್ನು ಮುಟ್ಟಿಬಿಟ್ಟಿತು. ಕೆಂಪು ಗಡ್ಡದವನಿಗೆ ನಿಧಾನ ಮಾಡುವ ತಾಳ್ಮೆ ಇರಲಿಲ್ಲ. ನಿಶ್ಚಯವಾಗಿ ಚಿನ್ನದ ಮೊಹರುಗಳು ಶೇಖರವಾಗಿರುತ್ತದೆ ಎಂದು ಆನಂದದಿಂದ ಕುಣಿಯುತ್ತ ಬಿದಿರು ಗಿಡದ ಬಳಿಗೆ ಬಂದ. ಬಿದಿರನ್ನು ಸೀಳಿದನೋ ಇಲ್ಲವೋ ಎನ್ನವಷ್ಟರಲ್ಲಿಯೇ ಬಿದಿರಿನ ಗಿಡದ ಒಳಗಿನಿಂದ ಕಪ್ಪಾದ ಕೆಟ್ಟವಾಸನೆಯ ಗಲೀಜು ನೀರು ಅವನ ಮೇಲೆ ಒಂದೇ ಸಮನೆ ಸುರಿಯಲು ಪ್ರಾರಂಭವಾಯಿತು. ಈ ಗಲೀಜು ನೀರು ಅವನನ್ನು ತೇಲಿಸಿಕೊಂಡೇ ಹೋಗಿಬಿಟ್ಟಿತು. ಹೀಗೆ ಏಕೆ ಆಯಿತು? ಸತ್ಯ ಸಂಗತಿ ಏನೆಂದರೆ ಮೊದಲಿನ ಮುದುಕ ಕರುಣೆ ಯುಳ್ಳವನಾಗಿದ್ದ. ಒಂದು ಒಳ್ಳೆಯ ಕೆಲಸಕ್ಕೆ ಪುರಸ್ಕಾರವೆಂಬಂತೆ ಅವನ ಬಿದಿರು ಗಿಡ ಉದ್ದವಾಗಿ ಬೆಳೆದು, ಸ್ವರ್ಗದ ಖಜಾನೆಯ ಬಾಗಿಲನ್ನೇ ತೆರೆದು ಲೂಟಿಮಾಡಿತ್ತು! ಲೋಭಿಯೂ, ಹೊಟ್ಟೆಕಿಚ್ಚಿ ನವನೂ ಆದ ಕೆಂಪು ಗಡ್ಡದವನ ಬಿದಿರು ಉದ್ದವಾಗಿ ಬೆಳೆದು, ಸ್ವರ್ಗದ ಬಚ್ಚಲು ಮನೆಗೆ ಹೋಗಿ ಅಘಾತ ಮಾಡಿತ್ತು ಮತ್ತು ಅಲ್ಲಿ ಎಷ್ಟೊಂದು ಕೊಳಕು ನೀರಿತ್ತೋ, ಅಷ್ಟೂ ಅವನ ಮೇಲೆ ಸುರಿದು ಕೊಚ್ಚಿಕೊಂಡು ಹೋಗಿತ್ತು. ಈ ರೀತಿ ಯಲ್ಲಿ ಅವನ ಕೆಟ್ಟ ಬುದ್ಧಿಗೆ ಸರಿಯಾದ ಶಿಕ್ಷೆಯಾಗಿತ್ತು.



# ದಿವ್ಯ ದಂಪತಿಗಳ ದಿವ್ಯ ಲೀಲೆ

ಸಿ.ಎಸ್. ಮಂಗಳಮ್ಮ



ಸಂನ್ಯಾಸ ಹಾಗೂ ಗೃಹಸ್ಥ ಜೀವನದ ಆದರ್ಶವನ್ನು ಆಧುನಿಕ ಜಗತ್ತಿಗೆ ಸೂಕ್ತವೆನಿಸುವ ರೀತಿಯಲ್ಲಿ ಸ್ವಂತ ಜೀವನದ ಮೂಲಕವೇ ತೋರಿಸಿಕೊಟ್ಟವರು ಶ್ರೀರಾಮಕೃಷ್ಣರು ಹಾಗೂ ಶ್ರೀಮಾತೆಯವರು. ಅವರ ದಿವ್ಯದಾಂಪತ್ಯದ ವಿಶೇಷತೆಯೊಂದಿಗೆ, ಅವರಿಬ್ಬರ ಜೀವನದಲ್ಲಿ ಕಂಡುಬರುವ ಅನೇಕ ಹೋಲಿಕೆಗಳನ್ನಿಲ್ಲಿ ಗುರುತಿಸಿ ನೋಡಿರುವ ಲೇಖಕಿ, ಮೈಸೂರು ಆಶ್ರಮದ ಹಿರಿಯ ಭಕ್ತರು. ಈ ಪತ್ರಿಕೆಯಲ್ಲಿ ಅವರ ಹಲವು ಲೇಖನಗಳು ಪ್ರಕಟವಾಗಿವೆ. ಇದಲ್ಲದೆ ಅನೇಕ ಆಧ್ಯಾತ್ಮಿಕ ಕೃತಿಗಳನ್ನು ಅವರು ಪ್ರಕಟಿಸಿದ್ದಾರೆ.

ಶ್ರೀರಾಮಕೃಷ್ಣ ಪರಮಹಂಸರು ನವಯುಗಾವತಾರಿಗಳು. ಸರ್ವಧರ್ಮ ಸಮನ್ವಯಾಚಾರ್ಯರೆನಿಸಿ ಸಮಾಜದಲ್ಲಿ ಹೊಸ ಕ್ರಾಂತಿಯ ಅಲೆಯನ್ನು ಎಬ್ಬಿಸಿದರು. ಲೋಕಕಲ್ಯಾಣಕಾರ್ಯವನ್ನೂ ಜೊತೆ-ಜೊತೆಯಲ್ಲಿ ಆಧ್ಯಾತ್ಮಿಕತೆಯ ಅನುಷ್ಠಾನವನ್ನೂ ಸಾಮಾನ್ಯ ಜನರನ್ನು ತಲುಪುವಂತೆ ಮಾಡಿ, ಸರಳ ಹಾಗೂ ಸುಲಭವಾದ ರೀತಿಯಲ್ಲಿ ದಿನನಿತ್ಯದ ನಡೆ, ನುಡಿಗಳ ಉದಾಹರಣೆಗಳ ಮೂಲಕ ಅವುಗಳನ್ನು ಬೋಧಿಸಿ ಜನಜಾಗೃತಿಯನ್ನುಂಟುಮಾಡಿದರು. ಆಗಿನ ಕಾಲದ ನವಯುವಕರನ್ನು ವಿಶೇಷವಾಗಿ ಆಕರ್ಷಿಸಿ, ಅವರಿಗೆ ಹೆಚ್ಚಿನ ಜವಾಬ್ದಾರಿಯನ್ನು ವಹಿಸಿದರು. ಇದರ ಮುಖ್ಯ ಉದ್ದೇಶ, 'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯಚ', 'ಶಿವಭಾವದಲ್ಲಿ ಜೀವಸೇವೆ.'

ಅವತಾರ ಪುರುಷರು ಧರೆಗಿಳಿದಾಗ ಅವರ ಕೆಲಸಕ್ಕೆ ಬೆಂಬಲವಾಗಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಹಲವರು ಜನ್ಮವೆತ್ತಿ ಬರುತ್ತಾರೆ. ರಾಮಾವತಾರದಲ್ಲಿ ವಾನರರೂ, ಕರಡಿಗಳೂ ಸಹಾಯಕ್ಕೆ ಒದಗಿ ಬಂದದ್ದನ್ನು ಕಾಣುತ್ತೇವೆ. ಕೃಷ್ಣಾವತಾರದಲ್ಲಿ ಗೊಲ್ಲರೂ, ಗೋಪಿಕೆಯರೂ ಅವನ ಮಹಿಮೆಯನ್ನು ಜಗತ್ತಿಗೆ ಸಾರಲು ಕಾರಣರಾದರು. ಅಂತೆಯೇ ಶ್ರೀರಾಮಕೃಷ್ಣರ ಜೀವನದಲ್ಲಿಯೂ ಅನೇಕ ಬೆಂಬಲಿಗರನ್ನು ಕಾಣುತ್ತೇವೆ. ವಿಶೇಷವಾಗಿ ಶ್ರೀಮಾತೆ ಶಾರದಾದೇವಿಯವರು ಶ್ರೀರಾಮಕೃಷ್ಣರ ಸಾಧನೆಗೆ ಶಕ್ತಿಯಾಗಿದ್ದರು. ಪರಮಹಂಸರಿಗೆ ಸರಿಸಮಾನರಾಗಿ ಲೋಕಕಲ್ಯಾಣ ಕಾರ್ಯದಲ್ಲಿ ನಿಲ್ಲುವ ಸರಳ, ಸಾತ್ವಿಕ ನಾರಿಶಿರೋಮಣಿ ಅವರು; ಭಾರತೀಯ ನಾರಿ, ಸಂಸ್ಕೃತಿಯ ಮೂರ್ತಿರೂಪಿಣಿ!

ಈ ದಿವ್ಯದಂಪತಿಗಳ ಜೀವನವನ್ನು ಅವಲೋಕಿಸಿದಾಗ ಒಬ್ಬರಿಗೊಬ್ಬರ ಸಹಕಾರವೆಷ್ಟಿತ್ತೆಂಬುದನ್ನು ಕಂಡು ಆಶ್ಚರ್ಯವೆನಿಸುತ್ತದೆ. ಸಾಂಸಾರಿಕವಾಗಿಯೂ, ಆಧ್ಯಾತ್ಮಿಕವಾಗಿಯೂ ಹಾಲು-ಜೇನಿನಂತೆ ಹೊಂದಾಣಿಕೆ. ಇದು ದೈವದತ್ತವಾದ್ದು. ಇಲ್ಲಿ ಪೈಪೋಟಿ ಇಲ್ಲ. ಸೋಲು-ಗೆಲುವಿನ ಪ್ರಶ್ನೆ ಇಲ್ಲ. ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಎರಡೂ ಕಡೆಯ ಚಿತ್ರಗಳಲ್ಲಿ ವ್ಯತ್ಯಾಸವಿರಬಹುದು, ಆದರೆ ಮೌಲ್ಯದಲ್ಲಿ ಹೆಚ್ಚು-ಕಮ್ಮಿ ಇಲ್ಲ. ಈ ಬಗ್ಗೆ ಕೆಲವು ಉದಾಹರಣೆಗಳನ್ನು ಸಾಕ್ಷೀಕರಿಸಿ, ಇಬ್ಬರ ಮೌಲ್ಯವನ್ನು ಅರಿಯುವ ಒಂದು ಪ್ರಯತ್ನ ಮಾಡೋಣ.

ಶ್ರೀಮಾತೆಯವರ ಹೊರತಾಗಿ ರಾಮಕೃಷ್ಣರನ್ನು ಊಹಿಸಿಕೊಂಡಾಗ 'ಕೊರತೆ' ಕಾಣುತ್ತದೆ. ಪರಮಹಂಸರೇ ಹೇಳುತ್ತಿದ್ದಂತೆ, ಬೆಂಕಿ-ಶಾಖ, ಸೂರ್ಯ-ಕಿರಣ ಬೇರೆ ಬೇರೆ ಆಗಿರಲು ಸಾಧ್ಯವೆ?

ಇಬ್ಬರೂ ದೈವಾಂಶ ಸಂಭೂತರು.

ಕಾಮಾರಪುಕುರ ಒಂದು ಹಳ್ಳಿ. ಅಲ್ಲಿ ಖುದಿರಾಮ ಚಟ್ಟೋಪಾಧ್ಯಾಯ ಮತ್ತು ಚಂದ್ರಮಣೀದೇವಿ ದಂಪತಿಗಳು. ದೈವಭಕ್ತರು, ಸತ್ಯಸಂಧರು. ನ್ಯಾಯಕ್ಕಾಗಿ ಬಡತನವನ್ನೇ ಒಪ್ಪಿಕೊಂಡವರು.

ಖುದಿರಾಮರು ಗಯೆಯಲ್ಲಿ ಪಿತೃಯಜ್ಞವನ್ನು ನೆರವೇರಿಸಿದಾಗ, ಭಗವಂತನು ತೃಪ್ತನಾಗಿ 'ನಿನ್ನ ಮಗನಾಗಿ ಜನಿಸುವೆ' ಎಂದು ಕನಸಿನಲ್ಲಿ ತಿಳಿಸಿದನು. ಇದೇ ವೇಳೆ ಚಂದ್ರಮಣಿದೇವಿಯು ಶಿವಮಂದಿರದಲ್ಲಿ ಆರಾಧನೆ ಮಾಡುತ್ತಿದ್ದಾಗ, ಶಿವಲಿಂಗದಿಂದ ಜ್ಯೋತಿಯೊಂದು ಹೊರಟು ಬಂದು ಚಂದ್ರಮಣಿದೇವಿಯಲ್ಲಿ ಐಕ್ಯವಾಯಿತು. ಹೀಗೆ ಹರಿ-ಹರರ ವರಪ್ರಸಾದ ರೂಪವೇ ಗದಾಧರನ (ಶ್ರೀರಾಮಕೃಷ್ಣರ ಬಾಲ್ಯದ ಹೆಸರು) ಜನನ.

ಜಯರಾಂಬಾಟಿ ಕಾಮಾರಪುಕುರದ ಸಮೀಪದ ಮತ್ತೊಂದು ಸಣ್ಣಹಳ್ಳಿ. ಅಲ್ಲಿ ಪರರ ವಸ್ತುವಿಗೆ ಆಸೆಪಡದೆ, ಇದ್ದುದರಲ್ಲಿ ತೃಪ್ತರಾಗಿ, ಸುಸಂಸ್ಕೃತರಾಗಿ, ಸರಳ ಜೀವನ ನಡೆಸುತ್ತಿದ್ದರು ರಾಮಚಂದ್ರ ಮುಖರ್ಜಿ ಮತ್ತು ಶ್ಯಾಮಾಸುಂದರಿ ದೇವಿ ಎಂಬ ದೈವಭಕ್ತ ದಂಪತಿಗಳು. ನೆರೆಯ ಹಳ್ಳಿ ಸಿಹೋರಿನ ಜಾತ್ರೆಗೆ ಶ್ಯಾಮಾಸುಂದರಿ ಹೋಗುತ್ತಿದ್ದಾಗ ಬಿಸಿಲಿನ ಧಗೆಗೆ ದಣಿವಾರಿಸಿಕೊಳ್ಳಲು ಒಂದು ಮರದ ಕೆಳಗೆ ಕುಳಿತಳು. ಮೈಮರೆತಳು. ಆಗ 'ನಾನು ನಿಮ್ಮ ಮನೆಯಲ್ಲಿ ನಿನಗೆ ಮಗಳಾಗಿ ಹುಟ್ಟುತ್ತೇನೆ' ಎಂದು ದೇವಿಯು ಹೇಳಿ ಅದೃಶ್ಯಳಾದಳು. ಅದೇ ರೀತಿ, ರಾಮಚಂದ್ರ ಮುಖರ್ಜಿಯು ಒಂದು ಪ್ರಯಾಣ ಮಾಡುತ್ತಿದ್ದಾಗ ಒಂದು ಬಿಲ್ವಮರದಡಿ ವಿಶ್ರಾಂತಿಗಾಗಿ ಮಲಗಿದನು. ಸರ್ವಾಲಂಕೃತೆ, ಅರುಣಾಂಬರಧಾರಿ ಕನ್ಯೆ, 'ನಾನು ನಿಮ್ಮ ಮನೆಗೆ ಬರುತ್ತೇನೆ' ಎಂದು ಹೇಳಿ ಮಾಯವಾದಳು. ನಂತರ ಕಾಲಕ್ರಮದಲ್ಲಿ ಆ ದಂಪತಿಗಳಿಗೆ ಜನಿಸಿದ ಶಿಶುವೇ ಶಾರದಾಮಣಿ! ಈ ದಿವ್ಯ ಶಿಶುಗಳೇ ಭಾವೀ 'ಧರ್ಮ ಸಂಸ್ಥಾಪಕರು.' 'ಯಾರು ಹೆಚ್ಚು, ಯಾರು ಕಮ್ಮಿ' ಹೇಳಿ!

## ಬಾಲ್ಯದ ವೈಶಿಷ್ಟ್ಯ

ಗಧಾದರನು ಎಲ್ಲ ಮಕ್ಕಳಂತೆ ಆಟ, ಪಾಠಗಳಲ್ಲಿ ಪಾಲ್ಗೊಂಡರೂ ಒಂದು ವಿಶೇಷತೆ ಎದ್ದು ಕಾಣುತ್ತಿತ್ತು. ಮಣ್ಣಿನಲ್ಲಿ ದೇವ-ದೇವಿಯರ ವಿಗ್ರಹಗಳನ್ನು ಮಾಡಿ ಪೂಜಿಸುತ್ತಿದ್ದ. ಸುಶ್ರಾವ್ಯವಾಗಿ ಹಾಡುತ್ತಿದ್ದ. ಪ್ರಕೃತಿಯ ಸೌಂದರ್ಯದಲ್ಲಿ ಮೈಮರೆತು, ಭಗವಂತನನ್ನೇ ಎಲ್ಲೆಲ್ಲೂ ಕಾಣುತ್ತಿದ್ದ. ಒಮ್ಮೆ ಶಿವರಾತ್ರಿಯ ಜಾಗರಣೆಗಾಗಿ ನಾಟಕದಲ್ಲಿ ಶಿವನ ಪಾತ್ರ ಧರಿಸಿ, ಶಿವಭಾವದಲ್ಲಿ ಮೈಮರೆತ ಪ್ರೇಕ್ಷಕರು ಸಾಕ್ಷಾತ್ ಶಿವನನ್ನೇ ಕಂಡಂತಾಗಿ, ಧನ್ಯತಾಭಾವವನ್ನು ಹೊಂದಿದರು. ಆದರೆ ಬಾಲಕನ ಭವ್ಯ ಭವಿಷ್ಯವನ್ನು ಅರಿತವನು ಒಬ್ಬನೇ. ಅವನೇ ಶ್ರೀನಿವಾಸ ಶಾಂಖಾರಿ. ಶಿವವೇಷಧಾರಿಗೆ ನಮಿಸಿ ಕೃತಕೃತ್ಯನಾದ.

ಪುಟ್ಟ ಹುಡುಗಿ ಶಾರದೆಯ ಬಾಲ್ಯವು ಸ್ತ್ರೀಸಹಜವಾದ ಕರುಣೆ, ಪ್ರೀತಿ, ಕ್ಷಮೆ, ಸಹನೆಗಳಿಂದ ಕೂಡಿತ್ತು. ತಮ್ಮಂದಿರನ್ನು ತಾಯಿಯಂತೆ ವಾತ್ಸಲ್ಯದಿಂದ ಕಾಣುವುದು, ಮನೆಗೆಲಸದಲ್ಲಿ ತಾಯಿಗೆ ಸಹಾಯಮಾಡುವುದು. ತಂದೆಯ ಪೂಜಾಕಾರ್ಯದಲ್ಲಿ ನೆರವಾಗುವುದು ಇತ್ಯಾದಿ ಗುಣಗಳಿಂದ ಎಲ್ಲರಿಗೂ ಪ್ರೀತಿಪಾತ್ರಳು. ಯಾವಾಗಲೂ ತನ್ನೊಡನೆ ತನ್ನ ಕೆಲಸಗಳಿಗೆ ಬೆಂಬಲಿಸುವಂತೆ ಒಬ್ಬ ಜೊತೆಗಾತಿ ಇರುವುದನ್ನು ಅನುಭವಿಸುತ್ತಿದ್ದಳು. ದಿವ್ಯ ಶಕ್ತಿ ಅದೆಂಬ ನಂಬಿಕೆ ಅವಳಿಗೆ. ಒಮ್ಮೆ ಮನೆಯಲ್ಲಿ ದುರ್ಗಾಪೂಜೆಯ ಸಡಗರ. ಅಲಂಕೃತಮಂಟಪದಲ್ಲಿ ದೇವಿ ಮಂಡಿಸಿದ್ದಾಳೆ. ಎದುರಿಗೆ ಪುಟ್ಟ



ಶ್ರೀರಾಮಕೃಷ್ಣರ ಹುಟ್ಟೂರು ಕಾಮಾರಪುಕುರ

ಬಾಲೆ (೩ವರ್ಷ) ಧ್ಯಾನಸ್ಥಿತೆಯಾಗಿದ್ದಾಳೆ. ಇದ್ದಕ್ಕಿದ್ದಂತೆ ಆ ಕೋಣೆ ಪ್ರಕಾಶದಿಂದ ತುಂಬಿ ಹೋಗಿದೆ. ನೆರೆದವರು ಬೆರಗಾಗಿದ್ದಾರೆ. ರಾಮಹೃದಯ ಘೋಷಾಲನೆಂಬ ಪರವೂರಿನಿಂದ ಬಂಧುವೊಬ್ಬನು ಬಂದಿದ್ದಾನೆ. ಅವನ ಆಶ್ಚರ್ಯಕ್ಕೆ ಮೇರೆಯೇ ಇಲ್ಲ. ಮಂಟಪದಲ್ಲಿ ಆಸೀನಳಾಗಿರುವ ದೇವಿಯ ವದನ, ಹಾಗೂ ಧ್ಯಾನಸ್ಥಿತೆ ಶಾರದೆಯ ಮುಖ ಎರಡೂ ಒಂದೇ ರೀತಿ ಇವೆ: ಪದೇ ಪದೇ ನೋಡಿದ. ಸಂದೇಹ ಹರಿಯಿತು. ಶಾರದೆ 'ದೇವಿ' ಎಂಬುದನ್ನು ಅರಿತ ಕೂಡಲೇ ನಮಸ್ಕರಿಸಿ ಧನ್ಯನಾದ.

ಗಧಾದರ ವೇಷ ಧರಿಸಿ 'ಶಿವ'ನಾದ. ಶಾರದೆ ಕುಳಿತಲ್ಲೇ 'ದೇವಿ'ಯ ದರ್ಶನವಿತ್ತಳು. ಇಬ್ಬರಲ್ಲೂ 'ಹೆಚ್ಚು-ಕಮ್ಮಿ'ಯ ಮಾತುಂಟೆ? ಹೇಳಿ.

ಎರಡು ನದಿಗಳು ಎಲ್ಲೋ ಹುಟ್ಟಿ ಹರಿದು, ಮುಂದೆಲ್ಲೋ ಒಂದು ಕಡೆ ಸಂಗಮವಾಗಿ, ಒಂದಾಗಿ ಮುಂದುವರೆದು, ಗುರಿ ಮುಟ್ಟುವವರೆಗೂ ಎಡ-ಬಲದ ಪ್ರದೇಶಗಳನ್ನೆಲ್ಲ ಫಲವತ್ತಾಗಿ ಮಾಡಿ ಬದುಕನ್ನು ಸಾರ್ಥಕಪಡಿಸಿಕೊಳ್ಳುತ್ತವೆ. ಅದರಂತೆ ಶಾರದಾ ದೇವಿ-ಗದಾಧರರ ಜೀವನ. ಸಿಹೋರು ಗ್ರಾಮ ಸಂಗಮಸ್ಥಳದಂತೆ ಮುನ್ಸೂಚನೆ ನೀಡುತ್ತದೆ. ಶ್ಯಾಮಾದೇವಿ ಪುಟ್ಟ ಶಾರದೆಯೊಡನೆ ಸಿಹೋರಿನ ಜಾತ್ರೆಗೆ ಬಂದಿದ್ದಾಳೆ. ಗದಾಧರನೂ ತನ್ನ ಮಾವನ ಮನೆಯಾದ ಸಿಹೋರಿಗೆ ಬಂದಿದ್ದಾನೆ. ಯುವಕ 'ಮೂರು ಕಾಸಿನ ಸಂಪಾದನೆಯ ವಿದ್ಯೆ'ಗೆ ಮಾರು ಹೋಗಲಿಲ್ಲ. ಶಾಶ್ವತ ಸುಖವನ್ನು ಕೊಡುವ 'ತಾಯಿ' ಯನ್ನು ಒಲಿಸಿಕೊಳ್ಳಲು ಸಿದ್ಧನಾಗುತ್ತಿದ್ದಾನೆ. ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗಿದ್ದಾನೆ. ಇಲ್ಲಿ ಜಾತ್ರೆಯಲ್ಲಿಯೂ ಕೀರ್ತನೆ, ಭಜನೆಗಳಲ್ಲಿ ಆನಂದವನ್ನು ಪಡೆಯುತ್ತಿದ್ದಾನೆ. ತಾಯಿಯ ಕಂಕುಳಲ್ಲಿ ಕುಳಿತಿದ್ದ ಪುಟ್ಟ ಶಾರದೆಯನ್ನು ಬಂಧುಗಳೊಬ್ಬರು 'ಶಾರದೆ, ನೀನು ಯಾರನ್ನು ಮದುವೆ ಆಗುತ್ತೀಯಾ?' ಎಂದು ಕೇಳಿದರು. ತೊದಲು ನುಡಿಯ ಶಾರದೆ, ತನ್ನ ತೋರುಬೆರಳಿನಿಂದ ಭಜನಾನಂದದಲ್ಲಿ ಮುಳುಗಿರುವ ಶ್ರೀರಾಮಕೃಷ್ಣರನ್ನು ತೋರಿಸುತ್ತಾಳೆ. ಇದೊಂದು ತಮಾಷೆಯಾಗಿ, ಆ ವಿಷಯ ಅಲ್ಲಿಗೇ ನಿಂತು ಹೋಯಿತು.

ಆದರೆ ಸೃಷ್ಟಿಕರ್ತ ಜಗತ್ತಿನ ಸೂತ್ರಧಾರ! ನಾಟಕದಲ್ಲಿ ಪಾತ್ರಗಳನ್ನು ಮರೆಯುವನೆ! ವೇದಿಕೆಗೆ ತಂದೇ ತರುತ್ತಾನೆ. ನಾಟಕವನ್ನು ನೋಡಿ ತೃಪ್ತನಾಗುತ್ತಾನೆ. ರಾಮಕೃಷ್ಣರು ದಕ್ಷಿಣೇಶ್ವರದಲ್ಲಿ 'ಭವ

ತಾರಿಣಿ'ಯನ್ನು ಸಾಕ್ಷಾತ್ಕರಿಸಿಕೊಂಡಿದ್ದಾರೆ. ತೃಪ್ತರಾಗಲಿಲ್ಲ. ಇನ್ನೂ ಅನೇಕ ಸಾಧನೆಗಳಲ್ಲಿ ಮಗ್ನರಾಗಿದ್ದಾರೆ. ದೇಹದ ಕಡೆ ನಿರ್ಲಕ್ಷ್ಯ. ಆರೋಗ್ಯದಲ್ಲಿ ಏರುಪೇರಾಯಿತು. ಹಳ್ಳಿಯಲ್ಲಿದ್ದ ತಾಯಿಗೆ ಮಗನ ಅನಾರೋಗ್ಯ ತಿಳಿದು ಚಿಂತೆಯಾಯಿತು. ಹಳ್ಳಿಗೆ ಕರೆಸಿಕೊಂಡಳು. ವಯಸ್ಸಿಗೆ ಬಂದ ಮಗನಿಗೆ ಮದುವೆ ಮಾಡಿದರೆ ಸುಧಾರಿಸಬಹುದೆಂದು ಯೋಚಿಸಿ, ಕನ್ಯೆಯನ್ನು ಹುಡುಕಲಾರಂಬಿಸಿದರು. ಸರಿಯಾದ ಕನ್ಯೆ ಸಿಗಲಿಲ್ಲ. ಆಗ ರಾಮಕೃಷ್ಣರೇ, ''ಅಲ್ಲಿ ಇಲ್ಲಿ ಹುಡುಕಿದರೇನು ಪ್ರಯೋಜನ? ಜಯರಾಂಬಾಟಿಯಲ್ಲಿ ನನಗಾಗಿಯೇ ಇರುವ ಹೆಣ್ಣೊಬ್ಬಳಿದ್ದಾಳೆ, ರಾಮಚಂದ್ರ ಮುಖರ್ಜಿಯ ಮಗಳು'' ಎಂದು ಸೂಚಿಸಿದರು. ತಾಯಿ ಮಗನ ಮಾತಿನಂತೆ ಜಯರಾಂಬಾಟಿಗೆ ಹೋದಳು. ಮುಖರ್ಜಿಯ ಮನೆಯಲ್ಲಿ ಕನ್ಯೆಯೇನೋ ಇದ್ದಳು. ಆದರೆ ವರನಿಗೂ-ವಧುವಿಗೂ ವಯಸ್ಸಿನ ಅಂತರ ಹೆಚ್ಚು. ದೈವಸಂಕಲ್ಪ! ಸುಮೂಹೂರ್ತದಲ್ಲಿ ವಿವಾಹವಾಯಿತು. ಕಾಮಾರಪುಕುರಕ್ಕೂ, ಜಯರಾಮಬಾಟಿಗೂ ಕೊಂಡಿಯಾದ ಸಿಹೋರಿನಲ್ಲಿ ಪುಟ್ಟಬಾಲೆ ಶಾರದೆ ತೋರುಬೆರಳಿನಲ್ಲಿ ತೋರಿದ್ದಳು, ತನ್ನ ಭಾವೀ ಪತಿಯನ್ನು. ಈಗ ಶ್ರೀರಾಮಕೃಷ್ಣರು ತಾವೇ ತಮ್ಮ 'ಸಹಧರ್ಮಚಾರಿಣಿ'ಯನ್ನು ಆಯ್ಕೆ ಮಾಡಿ ತೋರಿದರು. ಮುಂಚೆ ಯಾವ ಪರಿಚಯವೂ ಇದ್ದಿಲ್ಲ. ಈ ದಾಂಪತ್ಯಕ್ಕೆ ಯಾರ ಆಯ್ಕೆಗೆ ವಿಶೇಷತೆ? ಇಬ್ಬರೂ ಸಮಾನರೆಂದೇ ಹೇಳಬಹುದಲ್ಲವೆ?

ರಾಮಕೃಷ್ಣರು ದಕ್ಷಿಣೇಶ್ವರದಲ್ಲಿ ಭವತಾರಿಣಿಯ ಮಡಿಲಿನ ಶಿಶು. ಸಾಧನೆಯ ಉತ್ತುಂಗ ಶಿಖರದಲ್ಲಿದ್ದಾರೆ. ಹೊರಗಿನ ಪ್ರಪಂಚದ ಅರಿವೇ ಇಲ್ಲ. ಶಾರದೆ ಯುವತಿ, ತಾಯಿಯ ಮನೆಯಲ್ಲಿಯೇ ಇದ್ದಾಳೆ. ಹಳ್ಳಿಯ ಜನ ರಾಮಕೃಷ್ಣರ ಬಗ್ಗೆ ನಾನಾ ರೀತಿಯ ಮಾತುಗಳನ್ನಾಡುತ್ತಿದ್ದಾರೆ. 'ಅವರೊಬ್ಬ ಹುಚ್ಚು ಪೂಜಾರಿ. ಅಯ್ಯೋ, ಪಾಪ, ಶಾರದೆಗೆ ಹೀಗಾಗಬಾರದಿತ್ತು' ಎಂಬ ಚುಚ್ಚು ಮಾತುಗಳು ಹೊರಬೀಳುತ್ತಿವೆ. ಇದಕ್ಕೂ ಮುಂಚೆ ಒಂದೆರಡು ಬಾರಿ ಶ್ರೀರಾಮಕೃಷ್ಣರು ಕಾಮಾರಪುಕುರಕ್ಕೆ ಬಂದಿದ್ದಾಗ, ಶಾರದೆಯೂ ಅಲ್ಲಿಗೆ ಬಂದು ಗಂಡನ ಜೊತೆಯಲ್ಲಿದ್ದು, ಗಂಡನ ದೈವೀಭಾವವನ್ನೂ, ಅವರ ಸ್ವಭಾವವನ್ನೂ ಅರಿತಿದ್ದಳು. ಶಾರದೆ ಸಹನಾತಪಸ್ವಿನಿ! ಈಗ ಯೋಚಿಸಿದಳು, 'ಪತಿಯ ಅನಾರೋಗ್ಯದ ಪರಿಸ್ಥಿತಿಯಲ್ಲಿ ಜೊತೆಯಲ್ಲಿದ್ದು ಉಪಚಾರ ಮಾಡಬೇಕಾದದ್ದು ಪತ್ನಿಯ ಕರ್ತವ್ಯ' ಎಂದು.

ಗಂಗಾಸ್ನಾನಕ್ಕೆಂದು ಹೊರಟ ಬಂಧುಗಳ ಜೊತೆಯಲ್ಲಿ ದಕ್ಷಿಣೇಶ್ವರಕ್ಕೆ ಹೊರಟಳು. ದಾರಿಯಲ್ಲಿ ಜ್ವರಪೀಡಿತಳಾಗಿ ಮಲಗಿದಳು. ಆಗ ಸ್ವಪ್ನದಲ್ಲಿ ಕಾಳಿಮಾತೆಯೇ ದರ್ಶನವಿತ್ತು, ಸ್ಪರ್ಶಿಸಿ ಶುಭವನ್ನು ಹಾರೈಸಿದಳು. ಮಾರನೇ ದಿನ ಜ್ವರದಿಂದ ಮುಕ್ತಳಾಗಿ, ಯಾತ್ರೆ ಮುಂದುವರೆಸಿ ದಕ್ಷಿಣೇಶ್ವರವನ್ನು ತಲುಪಿದಾಗ, ಪತಿಯಿಂದ ಆತ್ಮೀಯ ಸ್ವಾಗತ ದೊರೆತು ಸಂತುಷ್ಟಳಾದಳು. ಪತಿ-ಪತ್ನಿಯರು ಒಬ್ಬರಿಂದೊಬ್ಬರು ದೂರದಲ್ಲಿದ್ದರೂ ಅವರಿಬ್ಬರ ಮನಸ್ಸುಗಳು ಹೇಗೆ ಹತ್ತಿರವಾಗಿದ್ದು ಸ್ಪಂದಿಸಿದವು? ರಾಮಕೃಷ್ಣರು 'ಕಾಳಿಯನ್ನು' ಅಮ್ಮ, ಎಂದರು. ಅದೇ 'ಅಮ್ಮ' ಶಾರದೆಯನ್ನು ಗಂಡನ ಬಳಿಗೆ ಸುಖವಾಗಿ ಕರೆತಂದಳು. ಹೇಳಿ, 'ಅಮ್ಮ'ನ ಪ್ರೀತಿಯಲ್ಲಿ ಇಬ್ಬರಿಗೂ ಹೆಚ್ಚು ಕಡಿಮೆ ಆಯಿತೆ?



ದಕ್ಷಿಣೇಶ್ವರದಲ್ಲಿ ನಹಬತ್ (ಎಡಗಡೆ) ; ಶ್ರೀರಾಮಕೃಷ್ಣರ ಕೋಣೆ (ಬಲಗಡೆ)

ರಾಮಕೃಷ್ಣರು ಸಂನ್ಯಾಸ ಸ್ವೀಕಾರ ಮಾಡಿದ್ದರೂ 'ಪತಿ'ಯ ಕರ್ತವ್ಯವನ್ನು ಮರೆಯಲಿಲ್ಲ. ಗೃಹಸ್ಥಧರ್ಮಕ್ಕೆ ತಕ್ಕಂತೆ ಹೆಂಡತಿಯನ್ನು ಚೆನ್ನಾಗಿ ನೋಡಿಕೊಂಡರು. ಗೌರವಿಸಿದರು. ಸತಿ ಶಾರದೆಯೂ 'ಸಹಧರ್ಮಿಣಿ'ಯ ಸ್ಥಾನವನ್ನು ಉನ್ನತ ಮಟ್ಟದಲ್ಲಿಯೇ ಕಾಪಾಡಿಕೊಂಡಳು. ಪತಿಯ ಮನೋಧರ್ಮಕ್ಕೆ ತಕ್ಕಂತೆ ಸೌಕರ್ಯವನ್ನು ಒದಗಿಸುತ್ತಿದ್ದಳು. ಸರಳವಾದ, ಮುಕ್ತಮನಸ್ಸಿನ, ನಿಃಸ್ವಾರ್ಥವಾದ, ಶುದ್ಧಪ್ರೇಮದ, ದಿವ್ಯವಾದ ಅನ್ಯೋನ್ಯ ದಾಂಪತ್ಯ. ಒಮ್ಮೆ ಪತಿಯ ಪಾದಗಳನ್ನು ಒತ್ತುತ್ತ ಕೇಳಿದಳು, ''ನಾನು ನಿಮಗೆ ಹೇಗೆ ಕಾಣುವೆ?'' ಪತಿಯ ಉತ್ತರ, ''ಮಂದಿರದಲ್ಲಿರುವ ಭವತಾರಿಣಿ, ನಹಬತ್‌ಖಾನೆಯಲ್ಲಿರುವ ನನ್ನ ತಾಯಿ, ಇಲ್ಲಿ ಶಾರದೆಯಾಗಿದ್ದಾಳೆ.'' ತೊಡಕಿಲ್ಲದೆ ಪ್ರಶ್ನೆ-ಉತ್ತರ, ಸರಳ-ನೇರ! ಗೃಹಿಣಿ ಜಾಣತನದಿಂದ ಪತಿಯ ಮನವನ್ನರಿಯುವ ಪ್ರಯತ್ನ ಮಾಡಿದಳು. 'ಸತಿ'ಯ ಸ್ಥಾನ ಎಷ್ಟು ಗೌರವವುಳ್ಳದ್ದು ಎಂಬುದನ್ನು ರಾಮಕೃಷ್ಣರು ಪೂಜ್ಯ ಹಾಗೂ ಗೌರವ ಭಾವನೆಯಿಂದ ತಿಳಿಸಿದರು. ಜೊತೆಗೆ, ''ನೀನು ನನ್ನ ಧರ್ಮಪತ್ನಿ. ನೀನು ಇಚ್ಛಿಸಿದರೆ ಸಂಸಾರಿಯಂತೆ ಇರಬಲ್ಲೆ. ನನ್ನದು ಅಧ್ಯಾತ್ಮದ ಗುರಿಯಾಗಿದ್ದರೂ ಗೃಹಸ್ಥಧರ್ಮವನ್ನು ಒಪ್ಪಿಕೊಳ್ಳುತ್ತೇನೆ.'' ಇಲ್ಲಿ ಸತಿ-ಪತಿಯರ ವಿಚಾರ-ವಿನಿಮಯ ಎಷ್ಟು ಪಾರದರ್ಶಕ. ಈ ರೀತಿಯ ಬಿಚ್ಚುಮನಸ್ಸಿನ ವ್ಯವಹಾರ ದಂಪತಿಗಳಲ್ಲಿ ಇದ್ದರೆ 'ಸಂಸಾರ' ಎಷ್ಟು ಸುಂದರ! ಒಬ್ಬರೊನ್ನಬ್ಬರು ಅರಿತು, ಹೊಂದಿಕೊಂಡರೆ ಅಲ್ಲಿಯೇ ಸ್ವರ್ಗ! ಗೃಹಸ್ಥಾಶ್ರಮದ ಮೌಲ್ಯ ಹೆಚ್ಚುತ್ತದೆ. ತ್ಯಾಗ ಇಬ್ಬರಿಗೂ ಸೇರಿದ್ದು.

ರಾಮಕೃಷ್ಣರು ಪತ್ನಿಯ ಮನದಾಳವನ್ನು ಪರೀಕ್ಷಿಸುತ್ತಿದ್ದಾರೆ. ಕೂಡಲೆ ಧರ್ಮಪತ್ನಿ ಶಾರದೆಯ ವಾಣಿ ಹೊರಹೊಮ್ಮಿತು. ''ನಾನು ನಿಮ್ಮ ಸಹಧರ್ಮಚಾರಿಣಿ. ಧರ್ಮಕ್ಕೆ ಅಡ್ಡಿ ಬರುವವಳಲ್ಲ. ನನ್ನನ್ನೂ ಅದೇ ದಾರಿಯಲ್ಲಿಯೇ ಮುನ್ನಡೆಸಿ.''

ಪತಿ-ಪತ್ನಿಯರಿಬ್ಬರೂ ಸ್ವಧರ್ಮಿಷ್ಠರು. ಒಬ್ಬರಿಗೊಬ್ಬರು ಪೂರಕ, ಜಗತ್ತಿನ ಕಲ್ಯಾಣವೇ ಗುರಿಯಾಗುಳ್ಳವರು. ರಾಮಕೃಷ್ಣರಿಗೆ 'ಕಾಳಿ'ಯೇ ಸರ್ವಸ್ವ. ಶಾರದೆಗೆ 'ಕಾಳಿ'ಯನ್ನೊಳಗೊಂಡ ಪತಿಯೇ ಸರ್ವಸ್ವ. ಒಂದೇ ನಾಣ್ಯದ ಎರಡು ಮುಖಗಳು. ಯಾರ ಧರ್ಮ ಹೆಚ್ಚು - ಯಾರ ಧರ್ಮ ಕಡಿಮೆ. ನ್ಯಾಯದ ತಕ್ಕಡಿ ಒಂದೇ ಸರಿ ದೂಗುತ್ತದಲ್ಲವೆ?

ರಾಮಕೃಷ್ಣರು ತಮ್ಮ ಸಾಧನೆಯ ಮಾರ್ಗದಲ್ಲಿ ಅಂತಿಮವಾಗಿ, ಪತ್ನಿ ಶಾರದಾದೇವಿಯವರನ್ನು ದೇವೀಪೀಠದಲ್ಲಿ ಆಹ್ವಾನಿಸಿ, ಪೂಜಿಸಿ ತಮ್ಮ ತಪಸ್ಸಿನ ಫಲವನ್ನು ಧಾರೆ ಎರೆದರು. ಜಗನ್ಮಾತೆಯ ಪದವಿಗೇರಿಸಿದರು! ಸಂಸಾರದಲ್ಲಿ ಸಾಮಾನ್ಯವಾಗಿ ಒಂದೆರಡು ಮಕ್ಕಳ ತಾಯಿಯಾಗಿ, ಅವುಗಳನ್ನು ಸರಿಯಾದ ಪ್ರಜೆಯನ್ನಾಗಿ ಮಾಡಲು ಒಬ್ಬ ಮಹಿಳೆ ಸುಸ್ತಾಗಿ ಬಿಡುತ್ತಾಳೆ. ಆದರೆ ಶಾರದಾ ದೇವಿಯವರು 'ಜಗನ್ಮಾತೆ'ಯ ಸ್ಥಾನವನ್ನು ಸಮರ್ಥವಾಗಿ ನಿಭಾಯಿಸಿದ ಮಹಾಮಹಿಳೆ! 'ಶಕ್ತಿ' ರೂಪಿಣಿ ಆಕೆ. ನಮ್ಮ ಬಳಿಯ ಒಂದು ಸಣ್ಣ ಪದಾರ್ಥವನ್ನು ಮತ್ತೊಬ್ಬರಿಗೆ ಕೊಡುವಾಗ, ಪಡೆದವರು ಅದನ್ನು ಸರಿಯಾಗಿ ನೋಡಿಕೊಳ್ಳಬಲ್ಲರೇ ಎಂದು ಯೋಚಿಸುತ್ತೇವೆ. ಶಾಸ್ತ್ರವೂ ಸಹ 'ಯೋಗ್ಯರಾದವರಿಗೆ ಕೊಡು' ಎನ್ನುತ್ತದೆ. ಕೊಡುವುದು-ಪಡೆಯುವುದು ಎರಡಕ್ಕೂ ಸಮಾನ ಯೋಗ್ಯತೆಯುಳ್ಳವರಾಗಿರಬೇಕು. ರಾಮಕೃಷ್ಣರು ತಮ್ಮ ದೈವೀಸಾಕ್ಷಾತ್ಕಾರದಿಂದ ಪಡೆದ ಜಗತ್ಕಲ್ಯಾಣದ ಜವಾಬ್ದಾರಿಯನ್ನು ಶ್ರೀಮಾತೆ ಶಾರದಾದೇವಿಯವರಿಗೆ ಹೊರಿಸಿದರು, ಶಾರದಾದೇವಿಯವರೂ ಆ ತಪಸ್ಸಿನ ಫಲವನ್ನು ಪಡೆದು, ತಮ್ಮ ಹೊಣೆಗಾರಿಕೆಯನ್ನು ಸಮರ್ಥವಾಗಿ ನಿಭಾಯಿಸಿದರೆನ್ನುವುದರಲ್ಲಿ ಎರಡು ಮಾತಿಲ್ಲ. ರಾಮಕೃಷ್ಣರು ಹೇಳುತ್ತಾರೆ, 'ಅವಳು ಶಾರದೆ, ಜ್ಞಾನದಾಯಿನಿ' ಎಂದು. ದೈವಾಂಶ ವ್ಯಕ್ತಿಗಳು. ತಮ್ಮ ತಮ್ಮ 'ಸ್ಥಾನ'ದ ಮಹತ್ವವನ್ನು ಮೆರೆದರು!

ಶ್ರೀರಾಮಕೃಷ್ಣರು 'ಕಾಳಿ'ಯನ್ನು ತಾಯಿಯಾಗಿ ಪಡೆದರು. ಶ್ರೀಮಾತೆಯವರು ದುಷ್ಟಶಿಕ್ಷಣಕ್ಕೆ 'ಶಕ್ತಿ'ಯೇ ಆದರು. ಹುಚ್ಚ ಹರೀಶನ ಕಾಟ ತಾಳಲಾರದೆ ಬಗಲಾದೇವಿಯಾಗಿ ಎದೆ ಮೆಟ್ಟಿ, ನಾಲಿಗೆ ಎಳೆದು ಶಿಕ್ಷಿಸಿ, ದಾರಿಗೆ ತಂದರು. ನಾರೀಶಕ್ತಿಯನ್ನು ಮೆರೆದರು.

ಶ್ರೀರಾಮಕೃಷ್ಣರು ಸಾಧನೆ, ತಪಸ್ಸುಗಳಿಂದ ಸಾಕ್ಷಾತ್ಕರಿಸಿಕೊಂಡ ಭವತಾರಿಣಿಯಿಂದ ಪಡೆದ ದಿವ್ಯ ಅನುಭವದಿಂದ ತಿಳಿದ, ಹಾಗೂ ಅನುಷ್ಠಾನಯೋಗ್ಯವಾದ **'ಶಿವಭಾವದಿಂದ ಜೀವ ಸೇವೆ'** ಎಂಬ ತತ್ತ್ವವನ್ನು ಜಗತ್ತಿಗೆ ಸಮರ್ಪಿಸಿದರು. ಇವನ್ನು ಕಾರ್ಯರೂಪಕ್ಕೆ ತರಲು ಅರ್ಹರಾದ ವ್ಯಕ್ತಿಗಳಿಗಾಗಿ ಅವರು ವ್ಯಾಕುಲಪಡುತ್ತಿದ್ದರು. ಭಗವತಿಯ ಸಾಕ್ಷಾತ್ಕಾರಕ್ಕಾಗಿ ಎಷ್ಟು ವ್ಯಾಕುಲಪಟ್ಟರೋ, ಈಗಲೂ ಅಷ್ಟೇ ವ್ಯಾಕುಲತೆಯಿಂದ ಪ್ರಾರ್ಥಿಸುತ್ತಿದ್ದರು. ದೇವಮಂದಿರದ ಮೇಲ್ಛಾವಣಿಯ ಮೇಲೇರಿ, ಪ್ರತಿದಿನ ಸಂಜೆ ಸೂರ್ಯ ಮುಳುಗುವ ಹೊತ್ತಿನಲ್ಲಿ 'ಅಮ್ಮ, ಈ ದಿನವೂ ವ್ಯರ್ಥವಾಯಿತು. ತಕ್ಕ ಶಿಷ್ಯರನ್ನು ಕರೆಸು' ಎಂದು ಪ್ರಾರ್ಥಿಸಿದರು. ತಾಯಿ ಮಕ್ಕಳ ದುಃಖವನ್ನು ಸಹಿಸುವುದಿಲ್ಲ. ಭವತಾರಿಣಿಯ ಕೃಪೆಯಿಂದ ಒಬ್ಬೊಬ್ಬರಾಗಿ ಶಿಷ್ಯರು ಬಂದರು. ಸಾಮಾನ್ಯರ ಜೊತೆಗೆ ಪ್ರಚಂಡ ಶಿಷ್ಯರೂ ಆಗಮಿಸಿದರು. ಆದರೆ ಶ್ರೀರಾಮಕೃಷ್ಣರು ಶಿಷ್ಯರನ್ನು ಪರೀಕ್ಷಿಸಿ, ಆರಿಸಿ ತೆಗೆದುಕೊಂಡರು. ತರಬೇತಿಯನ್ನು ಕೊಟ್ಟರು. ತ್ಯಾಗ-ಸೇವಾ ಧುರೀಣರನ್ನಾಗಿ ಮಾಡಿ ತಮ್ಮ ದಿವ್ಯದರ್ಶನವನ್ನು ಸಾರ್ಥಕಪಡಿಸಿಕೊಂಡರು. ಜಗದ್ಗುರುವಾದರು.

ಗುರುಕುಲದಲ್ಲಿ ಗುರುಪತ್ನಿಯ ಸ್ಥಾನವೂ ಅಷ್ಟೇ ಜವಾಬ್ದಾರಿಯುಳ್ಳದ್ದು. ಶಿಷ್ಯರ ಆಹಾರ, ಪಾನೀಯಗಳ ಕಡೆ ಗಮನವಷ್ಟೇ ಅಲ್ಲ, ತಾಯಿತಂದೆಯರಿಂದ ದೂರವಾಗಿ ಬಂದ ಮಕ್ಕಳಿಗೆ 'ತಾಯಿ'ಯಾಗಿ, ಮಾತೃವಾತ್ಸಲ್ಯದ ಕೊರತೆಯುಂಟಾಗದಂತೆ ನೋಡಿಕೊಳ್ಳುವ ಹೊಣೆಗಾರಿಕೆಯೂ ಉಂಟು. ತಮ್ಮ ಶಿಷ್ಯರನ್ನು ಮಕ್ಕಳಂತೆ ಕಾಪಾಡುವುದರಲ್ಲಿ ಶ್ರೀಮಾತೆಯ ವಾತ್ಸಲ್ಯ ಅಪೂರ್ವವಾದದ್ದು. ರಾಮಕೃಷ್ಣರ ಮಹಾಸಮಾಧಿಯ ನಂತರ, ಶಿಷ್ಯರುಗಳು ತಬ್ಬಲಿಯಾಗಲಿಲ್ಲ. ಶ್ರೀಮತೆ 'ತಾಯಿ' ಸ್ಥಾನದಲ್ಲಿದ್ದು, 'ಸಂಘಜನನಿ' ಯಾದರು. ಇಂದು ವಿಶ್ವದಾದ್ಯಂತ ಸೇವಾಕಾರ್ಯಗಳಲ್ಲಿ, ಆಧ್ಯಾತ್ಮಿಕತೆಯ ಮುಂಚೂಣಿಯಲ್ಲಿ ಬೆಳೆಯುತ್ತಿರುವ, ಮಾರ್ಗದರ್ಶಿಯಾಗಿರುವ 'ರಾಮಕೃಷ್ಣ ಮಠ ಮತ್ತು ಮಿಷನ್'ನ ಸ್ಥಾಪನೆಯ ಕಾರ್ಯದಲ್ಲಿ ಶ್ರೀಮಾತೆಯವರ ಆಶೀರ್ವಾದ ಮತ್ತು ಮಾತೃಶಕ್ತಿಗಳ ಸಮ್ಮಿಳಿತವಾಗಿದೆ. ಈಗ ಹೇಳಿ, ಗುರು-ಗುರುಪತ್ನಿ ಯಾರಿಗೆ ಯಾರು ಕಮ್ಮಿ ಅಂತ. ದೀಪ ಮತ್ತು ಅದರ ಬೆಳಕಿನಂತೆ ಅಭೇದ!

ಶ್ರೀರಾಮಕೃಷ್ಣರು ಶಿಷ್ಯರನ್ನು ಆರಿಸಿ ತೆಗೆದುಕೊಳ್ಳುತ್ತಿದ್ದರು. ಶ್ರೀಮಾತೆಯವರ ಬಳಿ ಯಾರೇ ಬಂದು 'ಅಮ್ಮ' ಎಂದರೆ ತಮ್ಮ ಸಹಜ ಸ್ವಭಾವದ ಮಾತೃವಾತ್ಸಲ್ಯದಿಂದ ಸೆಳೆದು ಬಿಡುತ್ತಿದ್ದರು. ದೀಕ್ಷೆ ಕೊಡುವಾಗ 'ಎಲ್ಲವೂ ರಾಮಕೃಷ್ಣರದು' ಎಂದು ತಮ್ಮಿಬ್ಬರ ಅಭೇದ ಭಾವವನ್ನು ಸ್ಪಷ್ಟಪಡಿಸುತ್ತಿದ್ದರು.

ಜಾತಿ ಮತದ ವಿಚಾರದಲ್ಲಿ ಇಬ್ಬರದೂ ಒಂದೇ ಅಭಿಪ್ರಾಯ – 'ಎಲ್ಲರೂ ದೇವರ ಮಕ್ಕಳೇ' ಎಂಬ ಸಮಾನ ಭಾವ. ಶ್ರೀರಾಮಕೃಷ್ಣರು ರಸಿಕನ ಮನೆಯ ಶೌಚಗೃಹವನ್ನು ತೊಳೆದರೆ, ಶ್ರೀಮಾತೆಯವರು ಹಸಿದ ಮುಸಲ್ಮಾನ ದರೋಡೆಕೋರನಿಗೆ ಅನ್ನವಿಕ್ಕಿ, ಎಂಜಲನ್ನೂ ಬಳಿದರು. ಇಬ್ಬರ ಜೀವನದಲ್ಲಿಯೂ ಇಂತಹ ಅನೇಕ ಸಾಮ್ಯಗಳು ಕಂಡು ಬರುತ್ತವೆ. ಇವುಗಳನ್ನು ಆರಿಸಿ ತೆಗೆಯಬೇಕಾಗುತ್ತದೆ. ತೆಗೆದಷ್ಟೂ ಅಮೂಲ್ಯವಾದ ವಿಷಯಗಳು ಹೊರಬರುತ್ತವೆ. ಇಬ್ಬರ ಜೀವನಗಾಥೆಯನ್ನು ಶ್ರದ್ಧೆಯಿಂದ ಓದಬೇಕು, ಆಗಲೇ ವಾಚಕರಿಗೆ ಈ ಅಲೌಕಿಕ ವಿಚಾರಗಳು ಮನವರಿಕೆಯಾಗುವವು. ಮಹಾತ್ಮರ ಜೀವನಚರಿತ್ರೆ ಉತ್ತಮ ಬದುಕಿಗೆ ಕೈಮರವಿದ್ದಂತೆ.

ಶ್ರೀರಾಮಕೃಷ್ಣರ ಸಾಧನೆ ಕಣ್ಣಿಗೆ ಗೋಚರ. ಜಗತ್ತಿಗೆ ತಂಪು ಮಳೆ ಬೀಳಬೇಕಾದರೆ, ಸಮುದ್ರದ ನೀರು ಕುದಿದು ಆವಿಯಾಗಿ ನಂತರ ವರ್ಷಧಾರೆ. ಭೂಮಿಯಲ್ಲಿ ಬಿದ್ದ ಬೀಜ, ಮಳೆ ನೀರನ್ನು ಹೀರಿಕೊಂಡು ಕೊಳೆತು, ಮೊಳೆತು ಸಸಿಯಾಗಿ, ಗಿಡವಾಗಿ, ಹೂವು ಕಾಯಿ ಹಣ್ಣುಗಳಾಗಿ, ಸೇವಿಸಲು ಯೋಗ್ಯವಾಗುತ್ತದೆ. ಹಾಗೂ ಬೀಜವನ್ನು ಬಿಟ್ಟು ಪರಂಪರೆ ಮುಂದುವರೆಯುವಂತೆ ಮಾಡುತ್ತದೆ, ಅಮರವಾಗುತ್ತದೆ. ಇಲ್ಲಿ ಎಲ್ಲ ಕ್ರಿಯೆಗಳೂ ಮೌನ! ಶ್ರೀಮಾತೆಯವರ ಜೀವನ 'ಮೌನಕಾಯಕ' ವನಸುಮದಂತೆ! ಶ್ರೀರಾಮಕೃಷ್ಣರು 'ಪತಿ'ಯ ಕರ್ತವ್ಯದಲ್ಲಿ ನಿಷ್ಠರಾದರೆ, ಶ್ರೀಮಾತೆ 'ಸತಿ ಧರ್ಮ'ದ ಸಾಕ್ಷಿರೂಪರು. ಇವರಿಬ್ಬರೂ ಸರಳ, ಸತ್ಯವಂತ, ನಿರ್ದೋಷ ದೈವೀ ದಂಪತಿಗಳು; ಒಂದೇ ನಾಣ್ಯದ ಎರಡು ಮುಖಗಳು.

**'ಜನನೀಂ ಶಾರದಾದೇವೀಂ ರಾಮಕೃಷ್ಣಂ ಜಗದ್ಗುರುಂ ।**
**ಪಾದಪದ್ಮೇ ತಯೋಃ ಶ್ರಿತ್ವಾ ಪ್ರಣಮಾಮಿ ಮುಹುರ್ಮುಹುಃ ॥'**

## ಅಸ್ಸಾಮಿನ ಅಧ್ಯಾತ್ಮ ಜ್ಯೋತಿ

# ಶ್ರೀಮಂತ ಶಂಕರದೇವ

**ಸ್ವಾಮಿ ವೀರೇಶಾನಂದ**

ಒಂದೊಂದು ಭೂಪ್ರದೇಶದಲ್ಲೂ ಆಧ್ಯಾತ್ಮಿಕ ಜಾಗೃತಿಗಾಗಿ ಮಹಾಪುರುಷನೊಬ್ಬನ ಜನನವಾಗುತ್ತದೆ. ಅಸ್ಸಾಮಿನ ಜನತೆಗೆ ಬೆಳಕನ್ನು ನೀಡಲೆಂದೇ ಜನಿಸಿದ ಮಹಾವ್ಯಕ್ತಿ ಶಂಕರದೇವನ ಸಂಕ್ಷಿಪ್ತ ಜೀವನಕಥೆಯಿದು. ಲೇಖಕರು '**ವಿವೇಕಪ್ರಭ**'ದ ಹಿಂದಿನ ಸಂಪಾದಕರು; ಉತ್ತಮ ವಾಗ್ಮಿಗಳು ಹಾಗೂ ಉತ್ತಮ ಲೇಖಕರು. ಪ್ರಸ್ತುತ ಬೇಲೂರು ಮಠದಲ್ಲಿರುವ **ಬ್ರಹ್ಮಚಾರಿ ಪ್ರಶಿಕ್ಷಣ ಕೇಂದ್ರ**ದಲ್ಲಿ ಅವರು ಆಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ.



ಮಹಾಪುರುಷ ಶ್ರೀಮಂತ ಶಂಕರದೇವ (೧೪೪೯-೧೫೬೮) ಈಶಾನ್ಯ ಭಾರತದ ಧ್ರುವತಾರೆಯಂತೆ ಬದುಕಿದವನು. ಆತನು ಆಧ್ಯಾತ್ಮಿಕ ಆಚಾರ್ಯನಾದ್ದನಲ್ಲದೆ, ಸಾಮಾಜಿಕ ಪರಿವರ್ತಕನೂ ಆಗಿದ್ದನು. ಅದರೊಂದಿಗೆ ಅವನು ಬಹು ದೊಡ್ಡ ಪಂಡಿತನೂ, ಕವಿಯೂ ಆಗಿದ್ದನು. ಸಂಗೀತ, ನಾಟಕ, ಚಿತ್ರಕಲೆ ಮತ್ತು ನರ್ತನ ಪ್ರಕಾರಗಳಲ್ಲಿ ಇವನ ಕಾಣಿಕೆ ಅನುಪಮವಾದುದು. ಹಳೆಯ ಮೂಢ ಪದ್ಧತಿಗಳನ್ನು ನಿವಾರಿಸಿ, ಅನಾಗರಿಕ ಬಾಳುವೆಯನ್ನು ಬಾಳುತ್ತಿದ್ದ ಹಲವು ಬುಡಕಟ್ಟುಗಳ ಜನರನ್ನು ಒಟ್ಟುಗೂಡಿಸಿದ ಮಹಾನ್ ವ್ಯಕ್ತಿ ಇವನು. ಸಣ್ಣ ರಾಜ್ಯವೊಂದರ ಮುಖ್ಯಸ್ಥನಾಗಿದ್ದರೂ ಕೂಡ, ಸರ್ವಸಂಗಪರಿತ್ಯಾಗಿಯಾದ ಸಂನ್ಯಾಸಿಯಂತೆ ಬಾಳಿದ ಸಂತ ಇವನು. ಕುಟುಂಬ ಬಾಳುವೆಯನ್ನು ಬಾಳಿದರೂ, ಭಗವಂತನಾದ ಶ್ರೀಕೃಷ್ಣನಲ್ಲಿ ಅಪಾರ ಭಕ್ತಿಯನ್ನು ಅಭ್ಯಾಸ ಮಾಡಿ ಕೃತಕೃತ್ಯನಾದ ದೊಡ್ಡ ಭಕ್ತ; ಹತ್ತು ಹಲವು ದೈವಗಳನ್ನು ಪೂಜಿಸುತ್ತಿದ್ದ ಜನರಿಗೆ ಭಗವಾನ್ ಕೃಷ್ಣನ ಏಕಪೂಜಾ ಪದ್ಧತಿಯನ್ನು ಬೋಧಿಸಿದ ದಿವ್ಯಪುರುಷನೀತ. ಹೀಗೆ ಶಂಕರದೇವನ ವ್ಯಕ್ತಿತ್ವವು ಹಲವು ಮುಖದ್ದು. ಆತನ ಕೊಡುಗೆಗಳೂ ಹಲವು ಬಗೆಯವು.

### ಬಾಲ್ಯ

ಶಂಕರದೇವ ಹುಟ್ಟಿದ್ದು ಅಸ್ಸಾಮಿನ ನಗೌನ್ ಜಿಲ್ಲೆಯ ಬರಡೊವಾ ಎಂಬ ಊರಿನಲ್ಲಿ. ಈ ಬಗ್ಗೆ ಅವನೇ ತನ್ನ ಒಂದು ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ. ೧೪೪೯ ನೇ ಇಸವಿಯ ಅಶ್ವಿನ-ಕಾರ್ತಿಕ ಮಾಸದಲ್ಲಿ ಕುಸುಮವರ ಮತ್ತು ಸತ್ಯಸಂಧ ದೇವಿಯವರಿಗೆ ಈ ಪುತ್ರರತ್ನ ಜನ್ಮತಾಳಿತು. ತಂದೆ ಭೂಯನ್ ಬುಡಕಟ್ಟಿನ ಶಿರೋಮಣಿ ಅಥವಾ ಮುಖ್ಯಸ್ಥನಾಗಿದ್ದನು. ಈತನು ಕಾಯಸ್ಥ ಕುಲಕ್ಕೆ ಸೇರಿದ್ದನು. ತಂದೆತಾಯಿಗಳು ಶಾಕ್ತರು; ದೇವಿಯನ್ನು ಪೂಜಿಸುತ್ತಿದ್ದರು. ಇನ್ನೊಂದು ಆಕರದ ಪ್ರಕಾರ ಅವರು ಶೈವರು. ಅದಕ್ಕೆಂದೇ ಮಗನಿಗೆ ಶಂಕರ ಎಂದು ಹೆಸರಿಟ್ಟರು. ಶಂಕರನ ಬಾಲ್ಯದಲ್ಲಿಯೇ ಅವನ ತಂದೆ, ತಾಯಿ ಮರಣವನ್ನಪ್ಪಿದ್ದರು. ಅವನನ್ನು ನೋಡಿಕೊಂಡದ್ದು ಅವನ ಅಜ್ಜಿಯಾದ ಕ್ಷೇರಸುತಿ ಎನ್ನುವ ವೃದ್ಧಮಹಿಳೆ. ಅವಳು ತನ್ನ ಜವಾಬ್ದಾರಿಯನ್ನು ಸಮರ್ಥವಾಗಿ ನಿಭಾಯಿಸಿದಳು.

ಬಾಲಕ ಶಂಕರ ತನ್ನ ಅಜ್ಜಿಯ ಅಕ್ಕರೆಯ ಆರೈಕೆಯಲ್ಲಿ ಬುದ್ಧಿವಂತನಾಗಿ ಮತ್ತು ಸಾಹಸಪ್ರವೃತ್ತಿಯುಳ್ಳ ಬಾಲಕನಾಗಿ ಬೆಳೆದನು. ತನ್ನ ಹೆಚ್ಚಿನ ಕಾಲವನ್ನು ಆಟಗಳಲ್ಲಿಯೇ ಕಳೆಯುತ್ತಿದ್ದನು. ಕೃಷ್ಣನಂತೆ ಗೋವಳನನಾಗಿ ಗೋವುಗಳನ್ನು ಹೊಡೆದುಕೊಂಡು ಹೋಗಿ ಹುಲ್ಲು ಮೇಯಿಸುತ್ತಿದ್ದನು. ಅವು ಮೇಯುತ್ತಿದ್ದಾಗ, ಕಾಡುಗುಡ್ಡಗಳಲ್ಲಿ ಅಲೆದಾಡುತ್ತಿದ್ದ. ಒಮ್ಮೆ ಶಂಕರನು ತುಂಬಿಹರಿಯುತ್ತಿದ್ದ ಬ್ರಹ್ಮಪುತ್ರ ನದಿಯನ್ನು ಸಲೀಸಾಗಿ ಈಜಿ ದಾಟಿದನಂತೆ! ಆತನ ಜೀವನಚರಿತ್ರೆಯಲ್ಲಿ ಅವನು ಮಾಡಿದ ಈ ಬಗೆಯ ಅನೇಕ ಸಾಹಸ ಕಥೆಗಳು ಉಲ್ಲೇಖವಾಗಿವೆ.

ಹೀಗೆಂದು ಅವನ ಅಜ್ಜಿ ಅವನನ್ನು ಸುಮ್ಮನೆ ಪುಂಡುಪೋಕರಿಯಾಗಿ ಅಲೆದಾಡಲು ಬಿಡಲಿಲ್ಲ. ಕುಟುಂಬದ ಸಂಪ್ರದಾಯದಂತೆ ಅವನು ದೊಡ್ಡ ಪಂಡಿತನಾಗುವುದು ಆವಶ್ಯಕವೆಂದು ಮನಗಾಣಿಸಿದಳು. ಅವಳ ಮಾತಿಗೆ ಮನ್ನಣೆಕೊಟ್ಟ ಶಂಕರನು ಪಾಠಶಾಲೆಗೆ ಹೋಗಲು ಆರಂಭಿಸಿದನು.

ಶಂಕರನು ಅತ್ಯಂತ ಮೇಧಾವಿಯಾದ ವಿದ್ಯಾರ್ಥಿಯಾಗಿದ್ದನು. ಅವನಿಗೆ ವ್ಯಂಜನಾಕ್ಷರಗಳನ್ನು ಮಾತ್ರ ಹೇಳಿಕೊಡಲಾಗಿತ್ತು.

ಮೊದಲ ಸ್ವರವರ್ಣ ಮಾತ್ರ ಪಾಠವಾಗಿತ್ತು. ಒಮ್ಮೆ ಆತನ ಗುರುವಾದ ಮಹೇಂದ್ರ ಕಂಡಲಿಯು ಉಚ್ಚ ವರ್ಗದ ವಿದ್ಯಾರ್ಥಿಗಳಿಗೆ ತಮ್ಮ ತಮ್ಮ ಇಷ್ಟದೇವತೆಯ ಮೇಲೆ ಒಂದು ಶ್ಲೋಕವನ್ನು ರಚಿಸಿರೆಂದು ಹೇಳಿದನು. ಆ ವಿದ್ಯಾರ್ಥಿಗಳ ಜೊತೆಗೆ ಕುಳಿತಿದ್ದ ಶಂಕರನೂ ತನಗೆ ಗೊತ್ತಿದ್ದ ಅಕ್ಷರಗಳನ್ನು ಜೋಡಿಸಿಕೊಂಡು, ಒಂದು ಸುಂದರ ಶ್ಲೋಕವನ್ನು ರಚಿಸಿದನು. ಆ ಶ್ಲೋಕದಲ್ಲಿ ಅವನು ಕಲಿತಿದ್ದ ಪ್ರಥಮ ಸ್ವರವರ್ಣ ಮತ್ತು ವ್ಯಂಜನಾಕ್ಷರಗಳು ಮಾತ್ರವೇ ಇದ್ದವು!

ಶಂಕರನು ತನ್ನ ಅಗಾಧ ಬುದ್ಧಿಮತ್ತೆಯಿಂದ ಎಲ್ಲ ಶಾಸ್ತ್ರಗಳಲ್ಲಿಯೂ ಪರಿಣತನಾದನು. ಇದಲ್ಲದೆ ವಿವಿಧ ತಾತ್ತ್ವಿಕ ವಿಷಯಗಳ ನಡುವೆ ತುಲನಾತ್ಮಕ ಅಧ್ಯಯನವನ್ನು ಕೂಡ ಮಾಡಲು ಆರಂಭಿಸಿದನು. ಇತರರಿಗೆ ಅಧ್ಯಯನ ಮಾಡಲು ಇಡೀ ಜೀವಿತವೇ ಬೇಕಾಗ ಬಹುದಾದಷ್ಟು ಜ್ಞಾನರಾಶಿಯನ್ನು ಕೇವಲ ಐದು ವರ್ಷಗಳಲ್ಲಿ ಕಲಿತುಕೊಂಡುಬಿಟ್ಟನು. ತನಗಿಂತ ಎಷ್ಟೋ ದೊಡ್ಡವರಾದ ವಿದ್ಯಾರ್ಥಿಗಳಿಗೆ ತಾನೇ ಪಾಠ ಹೇಳಿಕೊಡಲು ಆರಂಭಿಸಿದನು. ಇವೆಲ್ಲದರಿಂದ ಅವನು ತನ್ನ ಗುರುಗಳ ಮೇಲೆ ಎಣೆಯಿಲ್ಲದ ಪ್ರಭಾವವನ್ನು ಬೀರಿದನು. ಗುರುಗಳು ಅವನ ಮಹಾನತೆಯನ್ನು ಮನಗಂಡರು.

ಒಮ್ಮೆ ಶಂಕರನು ಮಲಗಿದ್ದಾಗ, ಸೂರ್ಯನ ಬೆಳಕು ತಾಗದಿರಲೆಂದು ಸರ್ಪವೊಂದು ಹೆಡೆಯೆತ್ತಿ ಕಾಯ್ದುಕೊಂಡಿತ್ತು. ಇದನ್ನು ಕಂಡ ಗುರುಗಳಾದ ಮಹೇಂದ್ರ ಕುಂಡಲಿಯು ಅಚ್ಚರಿಗೊಂಡರು. ಬಾಲಕ ಶಂಕರನು ಭಗವಾನ್ ನಾರಾಯಣನ ಅವತಾರವೆಂದೇ ಅವರು ಪರಿಗಣಿಸಿದರು. ಅಂದಿನಿಂದ ಆ ಶಾಲೆಯ ಎಲ್ಲ ವಿದ್ಯಾರ್ಥಿಗಳಿಗೂ, ಅವನನ್ನು 'ಶಂಕರದೇವ' ಎಂದು ಕರೆಯಿರೆಂದು ಆದೇಶವಿತ್ತರು. ಹೀಗೆ ಬಾಲಕ ಶಂಕರನು, ಶಂಕರದೇವನಾಗಿಬಿಟ್ಟನು!

ಶಂಕರದೇವನು ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವಾಗಲೇ '**ಹರಿಶ್ಚಂದ್ರ ಉಪಾಖ್ಯಾನ**' ಎಂಬ ಖಂಡಕಾವ್ಯವನ್ನು ರಚಿಸಿದನು. ಹದಿನೇಳನೆಯ ವಯಸ್ಸಿಗೆ ಸಕಲಶಾಸ್ತ್ರಪಾರಂಗತನಾಗಿ ಪಾಠಶಾಲೆಯಿಂದ ಹೊರಬಂದನು.

### ಯೌವನದ ಜೀವನ

ಶಂಕರದೇವನು ಈಗ ತನ್ನ ಊರಾದ ಬರಡೋವಾಕ್ಕೆ ವಾಪಸ್ಸು ಬಂದನು. ತನ್ನ ತಂದೆಯ ಅಧಿಕಾರವನ್ನು ತಾನು ಪಡೆದುಕೊಂಡು, ಅಲ್ಲಿನ ಶಿರೋಮಣಿ ಅಥವಾ ಮುಖ್ಯಸ್ಥನಾದನು. ಅವನು ವಾಪಸ್ಸು ಬರುವವರೆಗೂ ಅವನ ತಂದೆಯ ಸೋದರಮಾವಂದಿರು ಭೂಯನ್ ಬುಡಕಟ್ಟಿನ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದರು.

ಒಂದು ಚಿಕ್ಕರಾಜ್ಯದ ಅಧಿಪತಿಯಾದರೂ, ಶಂಕರದೇವನು ಅಧ್ಯಯನದ ಮೇಲೆ ತನಗಿದ್ದ ಅಪಾರ ಆಸಕ್ತಿಯನ್ನು ಕಳೆದುಕೊಳ್ಳಲಿಲ್ಲ. ಕೆಲವು ದಿನ ಯೋಗಾಭ್ಯಾಸವನ್ನು ಮಾಡಿ ಅದರಲ್ಲಿ ಪಾರಂಗತನಾದನು. ಆದರೆ ಸ್ವಲ್ಪ ಕಾಲದಲ್ಲಿಯೇ ಅದರಲ್ಲಿ ಆಸಕ್ತಿಯನ್ನು ಕಳೆದುಕೊಂಡನು. ಅವನ ಮನಸ್ಸು ಭಾಗವತ ಮಹಾಪುರಾಣದ ಕಡೆಗೆ ಆಕರ್ಷಿತವಾಯಿತು. ಭಾಗವತವು ಉಪದೇಶಿಸುವ ಭಕ್ತಿ ಮಾರ್ಗವೇ ಸರ್ವೋತ್ಕೃಷ್ಟ ಸಾಧನಾಪಥವೆಂದು ಅವನು ಕಂಡುಕೊಂಡನು. ಅದನ್ನೇ ಸಂಪೂರ್ಣವಾಗಿ ಅನುಸರಿಸಲು ಆರಂಭಿಸಿದನು.

ಈ ಕಾಲಘಟ್ಟದಲ್ಲಿ ನಡೆದ ಅತ್ಯಂತ ಮಹತ್ವದ ಘಟನೆಯೆಂದರೆ 'ಚಿಹ್ನಯಾತ್ರೆ.' ಇದೊಂದು ವಿಶಿಷ್ಟ ರಂಗಪ್ರಯೋಗ. ಅದರ ಹಿನ್ನಲೆ ಆಸಕ್ತಿಕರವಾಗಿದೆ. ಶಂಕರದೇವನ ತಂದೆಯ ಸೋದರ ಮಾವಂದಿರಾದ ಜಯಂತ ಮತ್ತು ಮಾಧವ ಎಂಬ ಇಬ್ಬರು ಹಿರಿಯರು ಶಂಕರದೇವನನ್ನು ಹೀಗೆ ಕೇಳಿಕೊಂಡರು: ''ನೀನು ಸರ್ವಶಾಸ್ತ್ರ ಪಾರಂಗತನಾಗಿರುವೆ. ಸಾಮಾನ್ಯಜನರಿಗಾಗಿ ವೈಕುಂಠದ ಒಂದು ಚಿತ್ರವನ್ನು ಬಿಡಿಸಿಕೊಡು.'' ಅವರ ಇಚ್ಛೆಯಂತೆ ಶಂಕರನು ಸಪ್ತ ವೈಕುಂಠಗಳ ಚಿತ್ರವನ್ನು ಬಟ್ಟೆಯ ಮೇಲೆ ಸುಂದರವಾಗಿ ಬಿಡಿಸಿದನು. ಅವುಗಳನ್ನು ತೂಗುಹಾಕಿ, ಆಧುನಿಕ ರಂಗಭೂಮಿಯಲ್ಲಿ ಮಾಡುವಂತೆ, ಅವುಗಳ ಹಿನ್ನೆಲೆಯಲ್ಲಿ ನಾಟಕವನ್ನು ಆಡಿಸಿದನು. ಅದಕ್ಕೆ ಬೇಕಾದ ಮೃದಂಗ, ತಾಳ ಪೋಷಾಕು – ಇವೆಲ್ಲವೂ ಶಂಕರದೇವನ ಮೇಲ್ವಿಚಾರಣೆಯಲ್ಲಿಯೇ ವಿಶೇಷವಾಗಿ ನಿರ್ಮಾಣಗೊಂಡವು. ಶಂಕರದೇವನೇ ಈ ನಾಟಕದ ನಿರ್ದೇಶನ ಮಾಡಿದನು. ಸೂತ್ರಧಾರನೇ ಮೊದಲಾದ ಹಲವು ಪಾತ್ರಗಳನ್ನು ತಾನೇ ವಹಿಸಿದನು. ಈ ಚಿಹ್ನಯಾತ್ರೆಯು ಅತ್ಯಂತ ಯಶಸ್ವಿಯಾಗಿ ಪ್ರದರ್ಶಿತವಾಯಿತು. ಅವನ ಗುರು ಮಹೇಂದ್ರ ಕುಂಡಲಿಯು ನೆರೆದಿದ್ದ ಹತ್ತು ಸಾವಿರ ಸಭಿಕರ ಮುಂದುಗಡೆ, ಶಂಕರದೇವನನ್ನು 'ಆಧ್ಯಾತ್ಮಿಕ ಗುರು' ಎಂದು ಘೋಷಿಸಿದನು. ಅವರಲ್ಲದೆ ಮತ್ತೂ ಕೆಲವರು ಶಂಕರದೇವನನ್ನು ಶರಣ (ಮಂತ್ರದೀಕ್ಷೆ) ಕೊಡುವಂತೆ ಕೇಳಿಕೊಂಡರು. ಶಂಕರನು ಮರುದಿನ ಬರುವಂತೆ ಅವರಿಗೆ ಹೇಳಿದನು.

ಅಂದಿನ ಸಂಜೆ ಭಾಗವತದ ಹತ್ತನೆಯ ಸ್ಕಂಧವನ್ನು ಅಸ್ಸಾಮೀ ಭಾಷೆಗೆ ಅನುವಾದ ಮಾಡಬೇಕು ಎಂಬ ಸಂಕಲ್ಪ ಅವನಿಗೆ ಉಂಟಾಯಿತು. ತನ್ನ ಅನುಯಾಯಿಗಳಿಗೆ ಈ ಮೂಲಕ ಮಂತ್ರದೀಕ್ಷೆ ಕೊಡಬೇಕು ಎಂದು ಅವನು ಇಚ್ಛಿಸಿದನು. ಅಂದಿನ ರಾತ್ರಿಯೇ 'ಉದ್ಧವಗೀತೆ' ಎಂಬ ಹೆಸರಿನ ಭಾಗವನ್ನು ಅನುವಾದ ಮಾಡಿದನು. ಈ ಕೃತಿಯು ಪದ್ಯರೂಪದಲ್ಲಿ ಇದ್ದಿತು. ಪ್ರಾತಃಕಾಲದಲ್ಲಿ ಗ್ರಂಥದ ಹಸ್ತಲಿಪಿಯನ್ನು ಒಂದು ವೇದಿಕೆಯ ಮೇಲೆ ಇರಿಸಿದನು. ನೆರೆದಿದ್ದ ಭಕ್ತರಿಗೆ ಅದಕ್ಕೆ ನಮಸ್ಕರಿಸುವಂತೆ ಆದೇಶಿಸಿದನು. ಹಾಗೆಯೇ ಉದ್ಧವಗೀತೆಯಲ್ಲಿ ಬರುವ ಕೆಲವು ಮುಖ್ಯಾಂಶಗಳನ್ನು ಅವರಿಗೆ ವಿವರಿಸಿ ಹೇಳಿದನು. ಹೀಗೆ ಅವನು ತನ್ನ ಪ್ರಪ್ರಥಮ ಮಂತ್ರದೀಕ್ಷೆಯನ್ನು ನೀಡಿದನು. ಈ ಬಗೆಯಲ್ಲಿ ಆಚಾರ್ಯ ಶಂಕರದೇವನ ಧರ್ಮಪ್ರಚಾರ ಕಾರ್ಯ ಆರಂಭವಾಯಿತು.

ತನ್ನ ಇಪ್ಪತ್ತನೆಯ ವಯಸ್ಸಿನಲ್ಲಿ ಶಂಕರದೇವನು ತನ್ನ ವಂಶಸ್ಥರ ಮೂಲನಿವಾಸಕ್ಕೆ ಹೋಗಲು ನಿರ್ಧರಿಸಿದನು. ಅದು ತೆಂಬುಯಾನಿ ಎಂಬ ಸ್ಥಳದಲ್ಲಿತ್ತು. ಭೂಯಾನ್ ಬುಡಕಟ್ಟು ಜನರು ಅವನೊಡನೆ ಪ್ರಯಾಣಮಾಡಿದರು. ಅಲ್ಲಿ ಹೋಗಿ ಶಂಕರದೇವನು ಕೈಗೊಂಡ ದೊಡ್ಡ ಕಾರ್ಯವೆಂದರೆ ಹೊಸದೊಂದು ಪ್ರಾರ್ಥನಾಮಂದಿರವನ್ನು ನಿರ್ಮಾಣಮಾಡಿದ್ದು. ಅದಕ್ಕಾಗಿ ಕಾಮಗಾರಿ ನಡೆಯುತ್ತಿದ್ದಾಗ, ಚತುರ್ಭುಜ ವಿಷ್ಣುವಿನ ಸುಂದರವಾದ ವಿಗ್ರಹ ದೊರಕಿತು.

ಅಂದಿನಿಂದ ಶಂಕರದೇವನು ತೆಂಬುಯಾನಿಯ ಪ್ರಾರ್ಥನಾ ಮಂದಿರದಲ್ಲಿ ಆಧ್ಯಾತ್ಮಿಕ ಸಾಧನೆ ಮಾಡುವುದರಲ್ಲಿಯೇ ತನ್ನೆಲ್ಲ ಸಮಯವನ್ನೂ ಕಳೆಯಲಾರಂಭಿಸಿದನು. ಹರಿಯ ನಾಮವನ್ನು ಹೃದಯಪೂರ್ವಕ ಭಕ್ತಿಯಿಂದ ಉಚ್ಚರಿಸುವುದರಲ್ಲಿಯೇ ಅವನು ದಿನವನ್ನೆಲ್ಲ ಕಳೆಯುತ್ತಿದ್ದನು. ಸುತ್ತಲಿನ ಜನರೆಲ್ಲ ಅವನ ಜೊತೆಗೆ ಭಗವಂತನ ನಾಮಸಂಕೀರ್ತನೆ ಮಾಡಲಾರಂಭಿಸಿದರು.

## ಪ್ರವಚನಕಾರನಾಗಿ

ಶಂಕರದೇವನು ತನ್ನ ಇಪ್ಪತ್ತೊಂದನೆಯ ವಯಸ್ಸಿನಲ್ಲಿ ದೋಲ್ ಪೂರ್ಣಿಮಾ ಉತ್ಸವವನ್ನು ಆಚರಿಸಲು ಆರಂಭಿಸಿದನು. ಜನರೆಲ್ಲರೂ ಇದರಲ್ಲಿ ಬಹಳ ಸಂಭ್ರಮದಿಂದ ಪಾಲ್ಗೊಂಡರು. ದಿನವಿಡೀ ನಾಮಸಂಕೀರ್ತನೆಯು ಬಹಳ ಆನಂದದಿಂದ ಜರುಗಿತು. ಶಂಕರದೇವನು ಉತ್ತಮ ಆಡಳಿತಗಾರನೆಂದು ಖ್ಯಾತಿ ಹೊಂದಿದನು. ಅವನು ಯಾವ ಪಕ್ಷಪಾತವನ್ನೂ ಮಾಡುತ್ತಿರಲಿಲ್ಲ. ಯಾರಿಗೂ ಒಮ್ಮೆಯೂ ನಿಂದೆಯ ಮಾತನ್ನು ಆಡಲಿಲ್ಲ. ಎಲ್ಲರೊಡನೆ ತುಂಬು ಅನುಕಂಪದಿಂದ ನಡೆದುಕೊಳ್ಳುತ್ತಿದ್ದನು. ಇದರಿಂದ ಶಂಕರದೇವನು ತನ್ನೆಲ್ಲ ಪ್ರಜೆಗಳ ಮೆಚ್ಚುಗೆಯನ್ನೂ ಪ್ರೀತಿಯನ್ನೂ ಗಳಿಸಿಕೊಂಡನು. ಅವರೆಲ್ಲರೂ ಅವನನ್ನು ಗೌರವದಿಂದ ತಮ್ಮ ಯುವ ನೇತಾರನೆಂದು ಕರೆಯಲಾರಂಭಿಸಿದರು.

ಇದೇ ಸಮಯದಲ್ಲಿ ಶಂಕರದೇವನು ಶಾಸ್ತ್ರಗಳ, ಅದರಲ್ಲೂ ಭಾಗವತ ಮಹಾಪುರಾಣದ ಆಳವಾದ ಅಧ್ಯಯನವನ್ನು ಕೈಗೊಂಡನು. ತನ್ನ ಆಡಳಿತ ಕಾರ್ಯಗಳ ಜೊತೆಜೊತೆಗೆ ಆಧ್ಯಾತ್ಮಿಕ ಸತ್ಸಂಗವನ್ನೂ ನಡೆಸುತ್ತಿದ್ದನು. ಹಲವು ಯುವಜನರು ಅವನ ಅನುಯಾಯಿಗಳಾದರು. ಪರಿಶುದ್ಧ ವೈಷ್ಣವ ಪಂಥವನ್ನು ಪ್ರಚಾರ ಮಾಡುವಂತೆ ಅವರು ಅವನನ್ನು ಕೇಳಿಕೊಂಡರು. ಅದರಂತೆ ಶ್ರೀಕೃಷ್ಣನಲ್ಲಿ ಏಕಾಂತ ಭಕ್ತಿಯನ್ನು ಬೋಧಿಸುವ ವೈಷ್ಣವ ಮಾರ್ಗವನ್ನು ಶಂಕರದೇವನು ಹುಟ್ಟುಹಾಕಿದನು. ಅದರ ತತ್ತ್ವಗಳನ್ನು ಜನಸಾಮಾನ್ಯರೂ ಅರ್ಥಮಾಡಿಕೊಳ್ಳುವಂತೆ ಸರಳವಾದ ಭಾಷೆಯಲ್ಲಿ ಬೋಧಿಸಲು ಆರಂಭಿಸಿದನು. ತನ್ನ ಆಧ್ಯಾತ್ಮಿಕ ಮತವನ್ನು ಸ್ಥಿರಗೊಳಿಸಲು ಅನೇಕ ಗ್ರಂಥಗಳನ್ನೂ, ಕೀರ್ತನೆಗಳನ್ನೂ ಅಸ್ಸಾಮೀ ಭಾಷೆಯಲ್ಲಿ ರಚಿಸಿದನು. ಇದೆಲ್ಲವನ್ನೂ ತನ್ನ ಸ್ವಂತ ಊರಾದ ಬರಡೋವಾದಲ್ಲಿ ಇದ್ದುಕೊಂಡೇ ಮಾಡುತ್ತಿದ್ದನು.

ಕಾಲ ಕಳೆದಂತೆ, ವೈಷ್ಣವ ಪಂಥದ ಪ್ರಚಾರವನ್ನು ಕೈಗೊಳ್ಳುವುದರಲ್ಲಿ ತನ್ನ ಪೂರ್ಣ ಸಮಯವನ್ನು ಕಳೆಯಬೇಕೆಂದು ಶಂಕರದೇವನು ನಿಶ್ಚಯಿಸಿದನು. ಅದಕ್ಕಾಗಿ ಆಡಳಿತದ ಭಾರವನ್ನೆಲ್ಲ ತನ್ನ ತಂದೆಯ ಸೋದರ ಮಾವಂದಿರಿಗೆ ವಹಿಸಿಬಿಟ್ಟನು. ಇದೇ ಸಮಯದಲ್ಲಿ ಅವನ ವಿವಾಹವೂ ಆಯಿತು. ಸದ್ವಂಶದ ಸೂರ್ಯಮತಿಯು ಶಂಕರದೇವನ ಪತ್ನಿಯಾದಳು.

ಶಂಕರದೇವನು ಭಾರತದಾದ್ಯಂತ ಹನ್ನೆರಡು ವರ್ಷಗಳ ಕಾಲ ತೀರ್ಥಯಾತ್ರೆಯನ್ನು ಕೈಗೊಂಡನು. ಜನರು ಅವನನ್ನು ಆಧ್ಯಾತ್ಮಿಕ ಗುರುವೆಂದು ಮನ್ನಣೆಯಿತ್ತು ಗೌರವಿಸಿದರು. ಶಂಕರದೇವನು ಬೃಂದಾವನಕ್ಕೆ ಭೇಟಿಕೊಟ್ಟಾಗ, ಮುಂದೆ ಚೈತನ್ಯದೇವನ ಅನುಯಾಯಿಗಳಾದ ರೂಪ ಗೋಸ್ವಾಮಿ ಮತ್ತು ಸನಾತನ ಗೋಸ್ವಾಮಿ ಸಹೋದರರೂ ಕೂಡ ಶಂಕರದೇವನ ಮೇರು ವ್ಯಕ್ತಿತ್ವವನ್ನು ಕಂಡು ಅವನನ್ನು ಗೌರವಿಸಿದರು. ಇದುವರೆಗೂ ರಾಜವೈಭೋಗದ ಜೀವನವನ್ನು ನಡೆಸುತ್ತಿದ್ದ ಅವರಿಬ್ಬರೂ ಸರಳ ಜೀವನವನ್ನು ನಡೆಸಲಾರಂಭಿಸಿದರು. ಬೃಂದಾವನದಲ್ಲಿ ಶಂಕರದೇವನು ಇದ್ದಷ್ಟು ಕಾಲ, ಅವನನ್ನು ಅವರು ಅನುಸರಿಸಿದರು. ಇವರಿಬ್ಬರಲ್ಲದೆ, ರಾಧಾ ಮತ್ತು ತ್ರಿಜಟ ಎಂಬ ತಾಪಸಿಗಳು, ರಮಾಕಾಂತನೆಂಬ ಭಕ್ತ, ಕವಿ ಗೋಪಿನಾಥ – ಇವರೆಲ್ಲರೂ ಶ್ರೀಶಂಕರದೇವನ ಶಿಷ್ಯರಾದರು. ಇದಲ್ಲದೆ, ಪುಣ್ಯಧಾಮವಾದ ಪುರೀನಗರದಲ್ಲೂ ಅವನು ತನ್ನ ಧಾರ್ಮಿಕ ಪಂಥವನ್ನು ಪ್ರಚಾರ ಮಾಡಿದನು. ಕಟ್ಟಕಡೆಗೆ ೧೪೯೩ನೆಯ ಇಸವಿಯಲ್ಲಿ ಶ್ರೀಮಂತ ಶಂಕರದೇವನು ತನ್ನ ಸ್ವಂತ ಊರಿಗೆ ಹಿಂತಿರುಗಿದನು.

ಹೀಗೆ ಶಂಕರದೇವನು ಉತ್ತರ ಭಾರತ ಮತ್ತು ಈಶಾನ್ಯ ಭಾರತಗಳಲ್ಲಿ ಭಕ್ತಿ ಆಂದೋಲನವನ್ನು ಸುದೃಢವಾಗಿ ಸಂಸ್ಥಾಪಿಸಿದನು. ಇದರ ಫಲವನ್ನು ಮುಂದಿನ ದಿನಗಳಲ್ಲಿ ಶ್ರೀಚೈತನ್ಯದೇವನು ಚೆನ್ನಾಗಿ ಬಳಸಿಕೊಂಡದ್ದನ್ನು ಕಾಣುತ್ತೇವೆ. ಈತನ ಸಮಕಾಲೀನನಾಗಿದ್ದ ಮಹಾತ್ಮ ಕಬೀರನು ತನ್ನ ಪದ್ಯಗಳಲ್ಲಿ ಶಂಕರದೇವನಿಗೆ ತನ್ನ ಶ್ರದ್ಧಾಂಜಲಿಯನ್ನು ಸಲ್ಲಿಸಿದ್ದಾನೆ.

ಶಂಕರದೇವನು ೧೪೯೮ನೆಯ ಇಸವಿಯಲ್ಲಿ ತೆಂಬುಯಾನಿಯಲ್ಲಿ ತನ್ನ ಮತದ ಅನುಯಾಯಿಗಳು ವಾಸಿಸುವ ಒಂದು ವಠಾರವನ್ನು ನಿರ್ಮಿಸಿದನು. ಅಲ್ಲಿ ಒಂದು ಕೀರ್ತನಾಮಂದಿರವಿತ್ತು. ಅದರ ಸುತ್ತಲೂ ಭಕ್ತರಿಗಾಗಿ ಶಂಕರನು ಮನೆಗಳನ್ನು ಕಟ್ಟಿದನು. ಅವನ ಸೋದರಳಿಯನಾದ ಜಗದಾನಂದನು ಶಂಕರದೇವನಿಗೆ ಇದರಲ್ಲಿ ಸಹಾಯ ಮಾಡಿದನು. ಕೀರ್ತನ ಮಂದಿರವು ಒಂದು ದೊಡ್ಡ ಸಭಾಂಗಣವನ್ನು ಒಳಗೊಂಡಿತ್ತು. ಅದರಲ್ಲಿ ಕುಳಿತು ಭಕ್ತರೆಲ್ಲರೂ ಭಗವಂತನ ನಾಮಸಂಕೀರ್ತನೆ ಮಾಡುತ್ತಿದ್ದರು. ಮುಂದಿನ ದಿನಗಳಲ್ಲಿ ಭಕ್ತರು ಶಂಕರದೇವನು ರಚಿಸಿದ 'ಗುಣಮಾಲಾ' ಎಂಬ ಸಣ್ಣ ಶಾಸ್ತ್ರಗ್ರಂಥವನ್ನು ವೇದಿಕೆಯ ಮೇಲೆ ಇಟ್ಟು ಪೂಜಿಸಲು ಆರಂಭಿಸಿದರು. ಗುಣಮಾಲಾ ಗ್ರಂಥವು ಭಾಗವತದ ಸಂಕ್ಷಿಪ್ತ ಅವತರಣಿಕೆಯಾಗಿದೆ. ಕಾಲಕ್ರಮೇಣ ಅಸ್ಸಾಮ್ ದೇಶದ ಪ್ರತಿ ಗ್ರಾಮದಲ್ಲಿಯೂ ಇಂಥ ಕೀರ್ತನಾ ಮಂದಿರಗಳನ್ನು ಸ್ಥಾಪಿಸಲಾಯಿತು. ಹೀಗೆ ಹರಿಭಕ್ತಿಯ ಗಂಗೆಯು ಆ ರಾಜ್ಯದುದ್ದಕ್ಕೂ ಹರಿಯಲಾರಂಭಿಸಿತು.

## ಶಂಕರದೇವನ ಬೋಧನೆಗಳು

ಶಂಕರದೇವನ ಬೋಧನೆಗಳು ಹಲವಾರು ಬಗೆಗಳಲ್ಲಿ ವಿಶಿಷ್ಟವಾದುವುಗಳು. ಅವು ಶಂಕರದೇವನ ಗಾಢವಾದ ಧ್ಯಾನ, ತಪಸ್ಸುಗಳ ಫಲಶ್ರುತಿಗಳು. ತನ್ನ ಗ್ರಂಥಗಳಲ್ಲಿ ಶಂಕರದೇವನು ಸದ್ಭಕ್ತರ ಸಂಗವನ್ನು ಮಾಡುವಂತೆ ಕರೆ ನೀಡುತ್ತಾನೆ. ಸತ್ಸಂಗವು ಆಧ್ಯಾತ್ಮಿಕ ಮಾರ್ಗದಲ್ಲಿ ಮುನ್ನಡೆಸುತ್ತದೆ. ದುಷ್ಟಸಂಗವು ಅಧರ್ಮ ಮಾರ್ಗದತ್ತ ನಮ್ಮನ್ನು ಒಯ್ಯುತ್ತದೆ. ನೈತಿಕ ಸ್ಥೈರ್ಯವುಳ್ಳ ವ್ಯಕ್ತಿಗಳು ಅಸಾಧಾರಣ ಇಚ್ಛಾಶಕ್ತಿಯನ್ನು ಹೊಂದಿರುತ್ತಾರೆ. ಆ ಮೂಲಕ

ಇತರರಲ್ಲಿಯೂ ಉತ್ತಮ ಮೌಲ್ಯಗಳನ್ನು ಮೂಡಿಸುತ್ತಾರೆ. ಭಗವಂತನ ನಾಮವನ್ನು ಸದಾ ಉಚ್ಚರಿಸುವಂತೆ ಶಂಕರದೇವನು ಜನಗಳಿಗೆ ಕರೆ ಕೊಡುತ್ತಾನೆ. ಭಗವಂತನ ನಾಮವು ಸುಪ್ತವಾಗಿರುವ ಆಧ್ಯಾತ್ಮಿಕ ಚೇತನವನ್ನು ಹೊರಹೊಮ್ಮಿಸುತ್ತದೆ, ಅಜ್ಞಾನವನ್ನು ನಿವಾರಿಸುತ್ತದೆ; ಪ್ರಾಪಂಚಿಕ ಬಂಧನಗಳನ್ನು ಕಡಿದುಹಾಕುತ್ತದೆ. ನಿರಂತರ ಭಗವನ್ನಾಮೋಚ್ಚಾರಣೆಯು ಪವಿತ್ರತೆ ಮತ್ತು ನಿರ್ಮಲತೆಯ ಸುಂದರ ವಾತಾವರಣವನ್ನು ಉಂಟುಮಾಡುತ್ತದೆ. ಈ ವಿಧಾನವು ಬಹಳ ಸರಳವಾದ ಸಾಧನವಾಗಿದೆ, ಇಂದಿನ ಕಾಲದಲ್ಲಿಯೂ ಆಚರಣೆಗೆ ತರಬಹುದಾದ ಆಧ್ಯಾತ್ಮಿಕ ಮಾರ್ಗವಾಗಿದೆ.

ಶಂಕರದೇವನು ಭಗವಂತನಲ್ಲಿ ಆತ್ಮಸಮರ್ಪಣೆಯನ್ನು ಉಪದೇಶಿಸಿದನು. ನಾವು ನಮ್ಮದೆಲ್ಲವನ್ನೂ ಭಗವಂತನಿಗೆ ಸಮರ್ಪಿಸಿಬಿಡಬೇಕು. ಹಾಗೆಯೇ ನಮ್ಮನ್ನು ಕೂಡ ಅವನಿಗೆ ಒಪ್ಪಿಸಿಕೊಳ್ಳಬೇಕು. ಆಗ ಮಾತ್ರ ಭಗವಂತನು ನಮ್ಮ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತಾನೆ. ಎಲ್ಲವೂ ನಡೆಯುವುದು ಅವನ ಇಚ್ಛೆಯಂತೆ. ಭಗವಂತನಲ್ಲಿ ಸಂಪೂರ್ಣ ಶರಣಾಗತಿಯು ಈ ತಥ್ಯವನ್ನು ಅರ್ಥಮಾಡಿಕೊಳ್ಳುವುದಕ್ಕೆ ನಮಗೆ ಸಹಾಯ ಮಾಡುತ್ತದೆ. ಆಗ ಮಾತ್ರ ಆಧ್ಯಾತ್ಮಿಕ ಮಾರ್ಗದ ಅತಿ ದೊಡ್ಡ ಕಂಟಕವಾದ ಅಹಂಕಾರವನ್ನು ಕಳೆದುಕೊಳ್ಳಲು ಭಕ್ತನಿಗೆ ಸಾಧ್ಯವಾಗುತ್ತದೆ. ಪರಿಪೂರ್ಣ ಭಕ್ತನಿಗೆ ಅಹಂಕಾರಲೇಶವೂ ಇರುವುದಿಲ್ಲ. ಅದು ಭಗವಂತನಿಂದ ಅವನನ್ನು ದೂರಮಾಡಿಬಿಡುತ್ತದೆ. ಭಕ್ತನು ತಾನು ಭಗವಂತನ ಕೈಯಲ್ಲಿನ ಯಂತ್ರವೆಂದು ಭಾವಿಸಬೇಕು. ಭಕ್ತನಲ್ಲಿ ಅಂಥ ಮನೋಭಾವ ಬರಬೇಕಾದರೆ ಅವನು ಮೂರು ಸಾಧನೆಗಳನ್ನು ಕೈಗೊಳ್ಳಲೇಬೇಕು. ಅವೆಂದರೆ, ಸತ್ಸಂಗ, ಭಗವನ್ನಾಮೋಚ್ಚಾರಣೆ ಮತ್ತು ಭಗವಂತನಲ್ಲಿ ಸಂಪೂರ್ಣ ಶರಣಾಗತಿ.

ಶ್ರೀಮಂತ ಶಂಕರದೇವನು ವಿಶಿಷ್ಟವಾದ ತತ್ತ್ವಶಾಸ್ತ್ರವನ್ನು ಬೋಧಿಸಿದನು. ಆತ್ಮಜ್ಞಾನ ಮತ್ತು ಭಗವದ್ಭಕ್ತಿ – ಇವುಗಳ ಸುಮಧುರ ಸಮ್ಮಿಲನವನ್ನು ನಾವಿಲ್ಲಿ ನೋಡುತ್ತೇವೆ. ಅವನ ಸಿದ್ಧಾಂತದಲ್ಲಿ ಅದ್ವೈತ, ದ್ವೈತ, ವಿಶಿಷ್ಟಾದ್ವೈತ – ಮುಂತಾದ ಹಲವು ತಾತ್ತ್ವಿಕ ಪ್ರಭೇದಗಳ ಉತ್ತಮ ಅಂಶಗಳ ಸುಂದರ ಸಮನ್ವಯವನ್ನು ಕಾಣಬಹುದು. ಹಾಗೆ ನೋಡಿದರೆ, ಹಿಂದೂಧರ್ಮದ ಸಂಪೂರ್ಣ ತಾತ್ತ್ವಿಕ ಭೂಮಿಕೆಯನ್ನು ಅವನ ಸಿದ್ಧಾಂತವು ಒಳಗೊಂಡಿದೆ ಎನ್ನಬಹುದು. ಒಬ್ಬ ವ್ಯಕ್ತಿಯು ತಲಪಬೇಕಾದ ಎಲ್ಲ ಆಧ್ಯಾತ್ಮಿಕ ಸ್ತರಗಳನ್ನೂ ಇಲ್ಲಿ ಬಿಂಬಿಸಲಾಗಿದೆ. ಸ್ಥೂಲದಿಂದ ಸೂಕ್ಷ್ಮಕ್ಕೆ, ವ್ಯವಹಾರದಿಂದ ಆಧ್ಯಾತ್ಮಿಕತೆಗೆ ಮತ್ತು ಜೀವತ್ವದಿಂದ ದೈವತ್ವದೆಡೆಗೆ ಕರೆದೊಯ್ಯುವ ಎಲ್ಲ ಸಾಧನಾಪ್ರಕಾರಗಳೂ ಶಂಕರದೇವನ ಸಿದ್ಧಾಂತದಲ್ಲಿ ಅಂತರ್ಗತವಾಗಿವೆ.

## ಉಪಸಂಹಾರ

ಶ್ರೀಶಂಕರದೇವನದು ಬಹುಮುಖ ಪ್ರತಿಭೆಯುಳ್ಳ ವ್ಯಕ್ತಿತ್ವ. ಚಿತ್ರಕಲೆ, ಸಾಹಿತ್ಯ, ನಾಟಕ, ಆಡಳಿತ, ಸಮಾಜ ಸುಧಾರಣೆ, ಧರ್ಮಪಂಥ ಸ್ಥಾಪನೆ, ಆಧ್ಯಾತ್ಮಿಕ ಔನ್ನತ್ಯ – ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿ ಅವನದು ಅಸಾಧಾರಣ ಸಾಧನೆ. ಹೀಗೆಂದೇ ಅಸ್ಸಾಮಿನ ಧಾರ್ಮಿಕ ಹಾಗೂ ಸಾಂಸ್ಕೃತಿಕ ಇತಿಹಾಸದಲ್ಲಿ ಶಂಕರದೇವನದು ಅಜರಾಮರವಾದ ಹೆಸರು. ಶ್ರೀಶಂಕರದೇವನು ೧೫೬೮ರಲ್ಲಿ ದಿವಂಗತನಾದನು. ಈ ಮೂಲಕ ಅಸ್ಸಾಮಿನ ಅಧ್ಯಾತ್ಮಿಕ ಚೈತನ್ಯವು ಕಳೆಗುಂದಿತು. ಆದರೂ ಅವನು ಹೊತ್ತಿಸಿದ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಪ್ರದೀಪವು ಇಂದಿಗೂ ಉಜ್ವಲವಾಗಿದೆ; ಲಕ್ಷಾಂತರ ಜನರ ಬಾಳನ್ನು ಬೆಳಗುತ್ತಲಿದೆ.

**ಆತ್ಮನನ್ನು ಯಾವುದೂ ನಾಶಮಾಡಲಾರದು. ಅದರಲ್ಲಿ ಅನಂತ ಶಕ್ತಿ ಇದೆ. ಅದನ್ನು ವ್ಯಕ್ತಪಡಿಸಬೇಕಷ್ಟೆ. ಇಲ್ಲೇ ಭಾರತದ ತತ್ತ್ವಶಾಸ್ತ್ರಗಳಿಗೂ ಇತರ ಶಾಸ್ತ್ರಗಳಿಗೂ ಇರುವ ವ್ಯತ್ಯಾಸ. ದ್ವೈತಿಗಳಾಗಲೀ, ವಿಶಿಷ್ಟಾದ್ವೈತಿಗಳಾಗಲೀ, ಅದ್ವೈತಿಗಳಾಗಲೀ ಎಲ್ಲರೂ ಆತ್ಮನಲ್ಲಿ ಆಗಲೇ ಎಲ್ಲವೂ ಇದೆ ಎಂದು ದೃಢವಾಗಿ ನಂಬುವರು. ಅದು ವ್ಯಕ್ತವಾಗಬೇಕು ಅಷ್ಟೆ. ಈ ಆತ್ಮಶ್ರದ್ಧೆ ಇಂದು ನನಗೆ ಬೇಕಾಗಿದೆ, ನಿಮಗೆಲ್ಲಾ ಬೇಕಾಗಿದೆ.**

*–ಸ್ವಾಮಿ ವಿವೇಕಾನಂದ*


***Statement about ownership and other particulars about Viveka Prabha (according to Form IV Rule 8, circulated by Registrar of Newspapers for India)***

| | | |
|---|---|---|
| 1. Place of Publication | : | **Mysore 570 020** |
| 2. Periodicity of Publication | : | **Monthly** |
| 3. Printer's Name | : | **Swami Muktidananda** |
| Nationality | : | **Indian** |
| Address | : | **President, Sri Ramakrishna Ashrama, Yadavagiri, Mysore 570 020** |
| 4. Publisher's Name | : | **Swami Muktidananda** |
| Nationality | : | **Indian** |
| Address | : | **President, Sri Ramakrishna Ashrama, Yadavagiri, Mysore 570 020** |
| 5. Editor's Name | : | **Swami Jnanayogananda** |
| Nationality | : | **Indian** |
| Address | : | **Sri Ramakrishna Ashrama Yadavagiri Mysore 570 020** |
| 6. Name & Addresses of the individuals who own the newspaper and partners or share-holders holding more than 1% of the capital | : | **President, Sri Ramakrishna Ashrama, Yadavagiri Mysore 570 020** |

**I, Swami Muktidananda, hereby declare that the particulars given above are true to the best of my knowledge and belief.**

*sd.*
*Swami Muktidananda*
01.03.2016 Signature of the publisher

# ಡಾ.ಸಿ.ಪಿ.ಕೆ. ಅವರ ಎರಡು ಕೃತಿಗಳು

## ಉಪನಿಷತ್‌ಕವಿತೆ

ಈ ವರ್ಷ ಸಿ.ಪಿ.ಕೆ. ಅವರು ಎರಡು ಒಳ್ಳೆಯ ಪುಸ್ತಕಗಳನ್ನು ಹೊರತಂದಿದ್ದಾರೆ. '**ಉಪನಿಷತ್ಕವಿತೆ**' ಹನ್ನೊಂದು ಪ್ರಮುಖ ಉಪನಿಷತ್ತುಗಳಲ್ಲಿ ಅಡಗಿರುವ ಕಾವ್ಯದ ಪರಿಚಯ. ಸಾಮಾನ್ಯರಿಗೆ ವೇದೋಪನಿಷತ್ತುಗಳೆಂದರೆ ತತ್ತ್ವಶಾಸ್ತ್ರ, ಆಧ್ಯಾತ್ಮಿಕ ವಿಚಾರಗಳ ಆಗರ. ಮಂತ್ರಗಳು ಪವಿತ್ರ; ಅವುಗಳಲ್ಲಿನ ಕಾವ್ಯ ಅವರಿಗೆ ಅಪರಿಚಿತ. 'ವಿವೇಕ ಪ್ರಭ'ದಲ್ಲಿ ಈ ಹಿಂದೆ ವೇದಸೂಕ್ತಗಳಲ್ಲಿ ಅಡಗಿದ ಕಾವ್ಯವನ್ನು ಅನುವಾದ ಸಮೇತ ಪರಿಚಯಿಸಲಾಗಿದೆ. ಮನುಷ್ಯನ ಅಸ್ತಿತ್ವದ ಹೆಗ್ಗುರುತೇ ಭಾಷೆಯಾಗಿದ್ದು, ಅದರ ಛಂದಸ್ಸಂಗೀತವನ್ನು ಸಮರ್ಥವಾಗಿ ದುಡಿಸಿಕೊಂಡಿದು ಮಂತ್ರವಾಗುತದೆ. 'ಶ್ರುತಿ' ಎನಿಸಿದ ವೇದೋಪನಿಷತ್ತುಗಳು ಮುಂದಿನ ಸಾಹಿತ್ಯವನ್ನು ಎಲ್ಲ ವಿಧದಲ್ಲೂ ಪ್ರಭಾವಿಸಿವೆ. ಖ್ಯಾತ ವಿಮರ್ಶಕ ಸಾಹಿತಿಗಳಾದ ಸಿ.ಪಿ.ಕೆ. ಅವರಿಂದ ಉಪನಿಷತ್ತುಗಳಲ್ಲಿ ಅಡಗಿದ ಕಾವ್ಯದ ಪರಿಚಯ, ವಿಮರ್ಶೆಗಳು '**ಉಪನಿಷತ್ಕವಿತೆ**'ಯಲ್ಲಿ ಸೊಗಸಾಗಿ ಬಂದಿವೆ.




*ಕೃತಿ* : **ಉಪನಿಷತ್ಕವಿತೆ**
*ಲೇಖಕರು*: **ಡಾ. ಸಿ.ಪಿ.ಕೆ.**
*ಪ್ರಕಾಶಕರು:* **ಸಂವಹನ, 12/1ಎ, ಈವನಿಂಗ್ ಬಜಾರ್ ಹಿಂಭಾಗ, ಶಿವರಾಂಪೇಟೆ, ಮೈಸೂರು-570 001**
*ಪುಟಗಳು* : **44**, *ಬೆಲೆ*: **35/-**

ಋಷಿಯಲ್ಲದ ಕವಿಯಿಲ್ಲ; ದರ್ಶನವುಳ್ಳವನು ತಾನೆ ಋಷಿ ಎಂಬ ಭಟ್ಟತೌತನ ಸೂಕ್ತಿಯನ್ನು ಉದಾಹರಿಸಿ, ಸ್ವಾಮಿ ವಿವೇಕಾನಂದರು ಹೇಳುವಂತೆ ಉಪನಿಷತ್ತಿನ ಭಾವನೆಯು ಯಾರ ಅರಿವಿಗೂ ಬಾರದ ಮುಂಜಾನೆಯ ಹಿಮಮಣಿ ಅತಿ ಸುಂದರವಾದ ಗುಲಾಬಿಯನ್ನು ಅರಳಿಸುವಂತೆ ಪ್ರಭಾವ ಬೀರುತ್ತದೆ ಎಂಬುದನ್ನು ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಉಪನಿಷತ್‌ಕಾವ್ಯದ ವಿವೇಚನೆಯ ನೆವದಲ್ಲಿ ಪ್ರಸ್ತಾವನೆಯ ಮೂಲಕ ಸಾಮಾನ್ಯರಿಗೆ ಉಪನಿಷತ್ ಸಾರವನ್ನು ನೀಡಿದ್ದಾರೆ. ಹೆದರದಿರಿ ಎಂಬ ಭರವಸೆ ನೀಡುವ '**ಅಭೀಃ**' ಎಂಬ ಪದವನ್ನು ಬಾರಿಬಾರಿಗೂ ಸಾರುವ ಉಪನಿಷತ್ತು ಸಾಹಿತ್ಯದ ಪ್ರಯೋಜನವಾದ ಅಭಯ, ಸಾಂತ್ವನ, ಭರವಸೆಗಳನ್ನು ನೀಡುತ್ತದೆ.

'**ಭೂಮೈವ ಸುಖಂ**' ಎಂಬ ಶೀರ್ಷಿಕೆಯ ಅಡಿ ಹತ್ತು ಭಾಗಗಳಲ್ಲಿ ಉಪನಿಷತ್ತುಗಳನ್ನು ಕುರಿತು ತಮ್ಮ ಮೆಚ್ಚುಗೆಯನ್ನು ಹರಿಸಿದ್ದಾರೆ ಸಿ.ಪಿ.ಕೆ. ಮೊದಲ ಭಾಗದಲ್ಲಿ ಉಪನಿಷತ್ತುಗಳಲ್ಲಿನ ವಿರಾಟ್ ದರ್ಶನವನ್ನು ವಿವರಿಸುತ್ತ, ಅವನ್ನು ಅಧ್ಯಯನ ಮಾಡುವ ಪ್ರತಿಯೊಬ್ಬನೂ ನೇರ, ಗಂಭೀರ ಕಾವ್ಯಮಯ ಉದಾತ್ತ ಭಾಷೆಯಲ್ಲಿ ಅವು ಚಿತ್ರಿಸುವ ಸೊಗಸನ್ನು ತಾನಾಗಿಯೇ ಮನಗಾಣುತ್ತಾನೆ ಎಂಬುದನ್ನು ತಿಳಿಸುತ್ತಾರೆ. ಎರಡನೆಯ ಭಾಗದಲ್ಲಿ 'ಉಪನಿಷತ್ತು ಕಾವ್ಯವೆ?' ಎಂದು ಪ್ರಶ್ನಿಸಿಕೊಂಡು ಅಲಂಕಾರಶಾಸ್ತ್ರದಲ್ಲಿ ಹೇಳಿದ 'ಕಾವ್ಯಮಾನಂದಾಯ', 'ಸದ್ಯಃ ಪರನಿರ್ವೃತಯೇ' ಎಂಬ ಪ್ರಯೋಜನಗಳು ಹೇಗೆ ಉಪನಿಷತ್ ಪದ್ಯ, ಗದ್ಯಗಳಲ್ಲಿವೆ ಎಂದು ಕೆಲವು ಮಂತ್ರಗಳನ್ನು ಉದಾಹರಿಸಿ ಮನಗಾಣಿಸುತ್ತಾರೆ. ಕುವೆಂಪು, ಸ್ವಾಮೀಜಿ, ಸ್ವಾಮಿ ರಂಗನಾಥಾನಂದ, ಸ್ವಾಮಿ ಹರ್ಷಾನಂದ ಮೊದಲಾದವರ ಹೇಳಿಕೆಗಳನ್ನೂ ನೀಡಿದ್ದಾರೆ. ಕಾಂತಾಸಮ್ಮಿತ, ಗುರುಶಿಷ್ಯ ಸಮ್ಮಿತಗಳು ಹೇಗೆ '**ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ನಿಬೋಧತ । ಕ್ಷುರಸ್ಯಧಾರಾ ನಿಶಿತಾ ದುರತ್ಯಯಾ। ದುರ್ಗಂ ಪಥಸ್ತತ್ ತತ್ ಕವಯೋ ವದಂತಿ**' ಮೊದಲಾದ ಮಂತ್ರಗಳಲ್ಲಿ ಕಂಡುಬರುತ್ತವೆ ಎಂದು ವಿವರಿಸಿದ್ದಾರೆ. ಕಾವ್ಯದಲ್ಲಿ ಅಡಗಿದ ಧ್ವನಿಯಂತೆಯೇ ಉಪನಿಷತ್ತಿನಲ್ಲೂ ನೇರವಾಗಿ ಹೇಳದೆ ಪರೋಕ್ಷವಾಗಿ ಹೇಳುವ, ವಿರೋಧಾಭಾಸಾತ್ಮಕ ಹಾಗೂ ಅತರ್ಕ್ಯ, ಸ್ವಷ್ಟಾಸ್ಪಷ್ಟತೆಯ ವಿಧಾನಗಳನ್ನು ಬಳಸಿರುವುದನ್ನು ತೋರಿಸುತ್ತಾರೆ. ಮೂರನೆಯ ಭಾಗದಲ್ಲಿ '**ನ ತತ್ರ ಸೂರ್ಯೋ ಭಾತಿ...**' ಮಂತ್ರವನ್ನು ಉದಾಹರಿಸಿ, ಇಲ್ಲಿ ಕವನದ ತಿರುವು ಇರುವುದನ್ನು ಸ್ಪಷ್ಟಗೊಳಿಸುತ್ತಾರೆ. ಇಲ್ಲಿ ಪ್ರಮುಖ ಭಾಗವಾದ ಭೂಮಾವಿಚಾರವನ್ನು ಭಯದ ಹಿನ್ನೆಲೆಯಲ್ಲಿ ಚಿತ್ರಿಸಿ, ಅಮೃತತ್ವದ ಆಶ್ವಾಸನೆಯಿತ್ತು ಕತ್ತಲಿನಿಂದ ಬೆಳಕಿಗೆ ಒಯ್ಯುವ ಕರೆ ನೀಡುವ ರೀತಿ ಉಪನಿಷತ್ತಿನ ಭವ್ಯ ಪ್ರಗಾಢವೆನ್ನುತ್ತಾರೆ ಲೇಖಕರು. '**ತ್ಯಾಗೇನೈಕೇ ಅಮೃತತ್ವಮಾನಶುಃ**' ಮೊದಲಾದ ಸೂಕ್ತಿಗಳನ್ನು ಉದಾಹರಿಸಿ, ಶುಷ್ಕವಲ್ಲದ ರೀತಿಯಲ್ಲಿ ಉಪಾದೇಯವಾದ ಉಪದೇಶ ಹೇಗೆ ಬಂದಿದೆಯೆಂದು ವಿವರಿಸುತ್ತಾರೆ. ನಾಲ್ಕನೆಯ ಭಾಗದಲ್ಲಿ ಉಪನಿಷತ್ತುಗಳಲ್ಲಿನ ವಿಶಿಷ್ಟ ನಿರೂಪಣೆಗಳತ್ತ ಗಮನ ಸೆಳೆಯುತ್ತಾರೆ. ಆತ್ಮದ ದ್ವಂದ್ವ ಸ್ವರೂಪವನ್ನು ಮನಗಾಣಿಸುವ '**ಅಣೋರಣೀಯಾನ್ ಮಹತೋ ಮಹೀಯಾನ್...**', ಬ್ರಹ್ಮವನ್ನು ವರ್ಣಿಸುವ '**ಅಶಬ್ದಂ ಅಸ್ಪರ್ಶಂ ಅರೂಪಂ ಅವ್ಯಯಂ...**' ಮಂತ್ರಗಳನ್ನು ಉದಾಹರಿಸಿ, ಅನಿರ್ವಚನೀಯದ ನಿರ್ವಚನ ಮಾಡುವ ಉಪನಿಷತ್ತಿನ ಉದ್ದೇಶ ಹೇಗೆ ಕಾವ್ಯಾಂಶ ಹೊಂದಿ ಸಾರ್ಥಕವಾಗಿದೆ ಎನ್ನುತ್ತಾರೆ. '**ದ್ವಾ ಸುಪರ್ಣಾ ಸಯುಜಾ ಸಖಾಯಾ...**' ಮಂತ್ರದಲ್ಲಿ ಮಾನವ ಮೋಕ್ಷದ ಸಮಸ್ತ ಸ್ವಪ್ನವನ್ನು ವೃಕ್ಷ, ಪಕ್ಷಿ ಪ್ರತಿಮೆಗಳನ್ನು ಉಪಯೋಗಿಸಿ ಅದ್ಭುತವಾದ ಅಲಂಕಾರಿಕ ಭಾಷೆಯಲ್ಲಿ ವರ್ಣಿಸುವುದನ್ನು ಕಾಣಿಸುತ್ತಾರೆ. ಐದನೆಯ ಭಾಗದಲ್ಲಿ ಉಪನಿಷತ್ತುಗಳಲ್ಲಿ ವಿಸ್ತಾರವಾದ ಖಂಡಕಾವ್ಯಗಳೇ ಇರುವುದನ್ನು ಗುರುತಿಸುತ್ತಾರೆ. ನಚಿಕೇತನ ಕಥೆಯಾದ ಕಠೋಪನಿಷತ್ತು ಇಂತಹ ಖಂಡಕಾವ್ಯ. ಕಾವ್ಯದ ಜೊತೆಯಲ್ಲಿ ಸಂಭಾಷಣೆಯ ರೂಪದಲ್ಲಿ ನಮಗೆ ಇಲ್ಲಿ ವೇದಾಂತದ ಸಮಗ್ರ ವ್ಯಾಖ್ಯಾನ ದೊರೆಯು

ತ್ತದೆ. ಇಲ್ಲಿ ಹಾಗೂ ಸತ್ಯಕಾಮ ಜಾಬಾಲನ ಕಥೆಯಲ್ಲಿನ ಪ್ರಬಂಧ ಧ್ವನಿಯನ್ನು ಸಿ.ಪಿ.ಕೆ.ಗುರುತಿಸುತ್ತಾರೆ. ಆರನೆಯ ಭಾಗದಲ್ಲಿ ಪರ ಬ್ರಹ್ಮನ ಮಹಿಮೆಯ ಮುಂದೆ ವಾಯು, ಅಗ್ನಿ ಮೊದಲಾದವರು ಅಸಹಾಯಕರಾಗುವ, ಉಮೆಯ ಕೃಪೆಯಿಂದ ಇಂದ್ರನು ಅದು ಬ್ರಹ್ಮ ಎಂದು ಶ್ರದ್ಧೆಯಿಂದ ತಿಳಿದುಕೊಳ್ಳುವ ಪ್ರಸಂಗದಿಂದ ಉಪನಿಷತ್ತುಗಳಲ್ಲಿನ ನಾಟಕೀಯತೆಯನ್ನು ವಿವರಿಸುತ್ತಾರೆ. ಏಳನೆಯ ಭಾಗದಲ್ಲಿ ಅರ್ಥಸಂಪನ್ನ ಪ್ರಾರ್ಥನೆಗಳನ್ನು ಕೊಟ್ಟು ಅಲ್ಲಿನ ಕಾವ್ಯಸ್ವರೂಪವಾದ ಮಾಧುರ್ಯ ಮತ್ತು ದೀಪ್ತಿ ಗಳನ್ನು ತೋರಿಸುತ್ತಾರೆ. ಕೊನೆಯ ಭಾಗಗಳಲ್ಲಿ ಉಪಮಾನ, ರೂಪಕ, ಪ್ರತೀಕ, ಪ್ರತಿಮೆ, ದೃಷ್ಟಾಂತಗಳಿರುವ ಅರ್ಥ ಪ್ರೇರಣೆಯ ಶಕ್ತಿಯುಳ್ಳ ವಾಕ್ಯಗಳನ್ನು ನೀಡಿ ಅಲ್ಲಿನ ಶೈಲಿಯನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಕೇವಲ ೪೪ ಪುಟಗಳಲ್ಲಿ ಸಾಂದ್ರವಾಗಿ ಉಪನಿಷತ್ತುಗಳ ಪರಿಚಯ ಮಾಡಿಸಿದ್ದಾರೆ. ಉದಾಹರಿಸಿದ ಮಂತ್ರಗಳ ಕವಿತಾನುವಾದವನ್ನೂ ಕೊಟ್ಟಿದ್ದರೆ ಸಂಸ್ಕೃತ ತಿಳಿಯದವರೂ, ಅಲ್ಲಿನ ಕಾವ್ಯದ ಅನುಭವವನ್ನು ಸವಿಯಬಹುದಿತ್ತು. ( ಕೆ. ಅನಂತರಾಮು ಅವರ '**ಜೀವದ ಹಾಡು**' ಈಶಾವಾಸ್ಯ, ಕೇನ, ತೈತ್ತಿರೀಯ ಮತ್ತು ಮಾಂಡೂಕ್ಯ ಉಪನಿಷತ್ತುಗಳ ಅರ್ಥಾನುಸಂಧಾನಕ್ಕೆ ಮೀಸಲಾದ ಇಂತಹ ಕವಿತಾನುವಾದ.) ಒಟ್ಟಿನಲ್ಲಿ ಸಂಗ್ರಹಯೋಗ್ಯ ಕೃತಿ. ಹಿರಿಯರಾದ ಸಿ.ಪಿ.ಕೆ.ಯವರು ಅಧ್ಯಾತ್ಮ ಪಿಪಾಸುಗಳಿಗಾಗಿ ಇಂತಹ ಇನ್ನಷ್ಟು ಕೃತಿಗಳನ್ನು ನೀಡಲಿ.

## ಶತಮಾನ ಶಾರದೆಗೆ




*ಕೃತಿ* : **ಶತಮಾನ ಶಾರದೆಗೆ**
*ಲೇಖಕ* : **ಡಾ. ಸಿ.ಪಿ.ಕೆ.**
*ಪ್ರಕಾಶಕರು:* **ಸಂವಹನ, 12/1ಎ, ಈವನಿಂಗ್ ಬಜಾರ್ ಹಿಂಭಾಗ, ಶಿವರಾಂಪೇಟೆ, ಮೈಸೂರು-1**
*ಪುಟಗಳು* : **84, ಬೆಲೆ : 65**

**'ಶತಮಾನ ಶಾರದೆಗೆ'** ಸಿ.ಪಿ.ಕೆ.ಯವರ ನಾಲ್ಕು ಖಂಡಕಾವ್ಯಗಳನ್ನು ಒಟ್ಟಿಗೆ ನೀಡುವ ಪುಸ್ತಕ. (ಮಹಾರಾಜಾ ಕಾಲೇಜು ಶತಮಾನೋತ್ಸವದ ಬಗ್ಗೆ ಕುವೆಂಪು ಅವರು ಬರೆದ ಕವಿತೆಯಿಂದ ಪ್ರೇರಿತರಾಗಿ) ಮೈಸೂರು ವಿಶ್ವವಿದ್ಯಾನಿಲಯದ ಶತಮಾನೋತ್ಸವವನ್ನು ಕುರಿತು ಬರೆದ ಸೊಗಸಾದ ಅರ್ಪಣಾ ಪದ್ಯ ಇದಕ್ಕೆ ಸೇರಿ, ಕೃತಿಗೆ ಶೀರ್ಷಿಕೆಯಾಗಿದೆ. ಮೊದಲನೆಯ ಖಂಡಕಾವ್ಯ '**ಶ್ರೀ ರಾಮಕೃಷ್ಣೋದಯ**'ವು ಲೇಖಕರು ಬರೆಯಲು ತೊಡಗಿರುವ ಮಹಾಕಾವ್ಯ '**ಸರ್ವೋದಯ ಸಂಭೂತಿ**' ಯ ನಾಂದಿಭಾಗ. ಶ್ರೀರಾಮಕೃಷ್ಣರ ಜನನದಿಂದ ತೊಡಗಿ, ಅವರು ದಕ್ಷಿಣೇಶ್ವರದ ಕಾಳೀ ದೇವಸ್ಥಾನದ ಪೂಜಾರಿಯಾದ ಮೇಲೆ ಅಣ್ಣ ರಾಮಕುಮಾರನ ಅನಿರೀಕ್ಷಿತ ಸಾವಿನವರೆಗಿನ ಜೀವನದ ಹಂತ ಇಲ್ಲಿನ ವಸ್ತು. ಮಹಾಛಂದಸ್ಸಿನಲ್ಲಿ, ಕುವೆಂಪು ಅವರ ಶೈಲಿಯನ್ನು ನೆನಪಿಗೆ ತರುವ ಭಾಷೆಯ ಈ ಕೃತಿ ಶ್ರೀರಾಮಕೃಷ್ಣರ ಚರಿತೆಯನ್ನು ಓದುವುದೇ ಒಂದು ಸೊಗಸು. 'ಅಶಿವಕ್ಕೆ, ಮತಮೌಢ್ಯ ಜಾಡ್ಯಕ್ಕೆ, ನಾಸ್ತಿಕ್ಯಕ್ಕೆ ಗದೆ ಹಿಡಿದ' ಗದಾಧರನಿಗೆ ಸಹಜವಾಗಿ 'ಹೊಟ್ಟೆ ಪಾಡಿನ ವಿದ್ಯೆಯಾಸ್ಥೆ ತೊಲಗಿ' ಶಾಲೆಗೆ ತಿಲಾಂಜಲಿ ನೀಡುತ್ತಾನೆ. ಅವನ ಚೇತನ ವಿಶ್ವಸಂಸಾರಭಾವವನ್ನು ಅನುಭವಿಸುತ್ತದೆ. ಕೊಲ್ಕತಾಕ್ಕೆ ಹೋಗಿ, ಪ್ರಪಂಚವನ್ನು ನೋಡಿ, ಅರ್ಥಮಾಡಿಕೊಂಡ ಮೇಲೆ, 'ಎನ್ನ ಬದುಕಿನ ಲಕ್ಷ್ಯ: ಬ್ರಹ್ಮ ಸಾಕ್ಷಾತ್ಕಾರ, ಒಡನೊಡನೆಯ ದೀನ ದಲಿತ ಜನತೆಯ ಹಿತದ ಸಾಧನೆ; ಆಗಲೀ ಜೀವಿತ ಸೇವೆಯ ಮಹಾಪ್ರಗಾಥ.' ಎಂದು ಅವನ ಅಂತರಂಗ ಸಂಕಲ್ಪಿಸುತ್ತದೆ. ಗದಾಧರ ವಿಕಸನ ಹೊಂದಿ, 'ಸುನೀಲ ವ್ಯೋಮ ವಿಸ್ತಾರದಲಿ ಹಾರಲನುವಾದುದು ಮಹಾಹಂಸ' ಎನ್ನುವಾಗ, 'ಶ್ರೀರಾಮಕೃಷ್ಣ ಎನ್ನುವ ನವನಾಮ ಸಮನಿಸುತ್ತದೆ' ಎನ್ನುವಲ್ಲಿಗೆ ನಿಂತು, ಮುಂದಿನ ಭಾಗಕ್ಕೆ ಕುತೂಹಲವನ್ನೀಯುತ್ತದೆ. ಧಾರಾವಾಹಿಯಾಗಿ ಇದು ಪೂರ್ಣಗೊಂಡು ಮಹಾಕಾವ್ಯವಾಗಿ ಅರಳಲಿ ಎನ್ನುವುದು ನಮ್ಮ ಹಾರೈಕೆ.

'**ಶ್ರೀರಾಮಕೃಷ್ಣೋದಯ**'ಕ್ಕೆ ಸಮಜೋಡಿಯಾಗಿ ಬಂದಿರುವ ಖಂಡಕಾವ್ಯ '**ಗಿರೀಶಗಾಥೆ.**' ಈ 'ಪಾಪಿ ಹೋಗಿ ಪರಮಾತ್ಮನಾಗಿ ಪರಿಣಮಿಸಿದ ಪಾವನ ಚರಿತೆ' 'ಪರಮಹಂಸ ಪವಾಡ' ಆರಂಭವಾಗುವುದೇ 'ತಾನು ಪಾಪಿ' ಎನ್ನುವ ಗಿರೀಶನಿಗೆ 'ಒಪ್ಪಿಸಿಕೋ ಸಂಪೂರ್ಣ ನಿನ್ನನಾ ದೇವ ಹಸ್ತಕ್ಕೆ' ಎಂದು ಶ್ರೀ ರಾಮಕೃಷ್ಣರು ಭರವಸೆ ನೀಡುವ ಸೋಜಿಗದ ಸಂವಾದದಿಂದ. ಪರಿಚಯ ಬೆಳೆದ ಅನಂತರವೂ ಮತ್ತೆ ಮತ್ತೆ 'ನನಗೆಂತು ಉದ್ಧಾರ?' ಎಂದು ಪ್ರಶ್ನಿಸುವ ಗಿರೀಶನನ್ನು ನೆಪ ಮಾಡಿಕೊಂಡು ಎಲ್ಲ ಸಾಧಕರಿಗೂ ಬೆಳಕು ನೀಡುವಂತೆ ಅವರು ಹೇಳುವುದು ಹೀಗೆ: 'ಎಲ್ಲವೂ ಕಾಲಲಬ್ಧಿಯ ಮೇಲೆ ನಿಂತಿದೆ; ಮಹಾಮಾಯೆ ಸರಿದು ದಾರಿ ಬಿಟ್ಟರೆ ಎಲ್ಲವೂ ಸುಸಾಧ್ಯ. ಇದುವೆ ಋತ ಸಂಕಲ್ಪ; ತೃಣಮಪಿ ನ ಚಲತಿ ತೇನ ವಿನಾ! ' ಅವನಿಗೆ ಯಥೇಚ್ಛವಾಗಿ ಕುಡಿಸಿ, ತಾನೇ ತನ್ನ ತಪ್ಪನ್ನು ಅರಿಯುವಂತೆ ಮಾಡುವ ಶ್ರೀರಾಮಕೃಷ್ಣರು 'ಸುಟ್ಟುಹಾಕಿದರವನೊಳಿದ್ದ ಕೆಟ್ಟುದನೆಲ್ಲ.' ಅವರ ಹಿರಿಯ ಮಗ ನರೇಂದ್ರನಾದರೆ, ಕಿರಿಯಮಗ ಈ ವಿಚಿತ್ರ ಗಿರೀಶ. ಆತ ಶುದ್ಧ ಶ್ರದ್ಧೆಯ ಪ್ರತಿಮೆ, ಪರ್ವತವೆ ಆಗುವ ಸೋಜಿಗವನ್ನು ಕವಿ ಸೊಗಸಾಗಿ ಕೆಲವೇ ಸನ್ನಿವೇಶಗಳನ್ನು ಉಪಯೋಗಿಸಿ ಚಿತ್ರಿಸಿದ್ದಾರೆ.

ಇನ್ನುಳಿದ ಖಂಡಕಾವ್ಯಗಳಾದ '**ವ್ಯಾಸಭಾಗ್ಯ**', '**ಅಹಲ್ಯಾ ಪರೀಕ್ಷಣ**'ಗಳು ಲೇಖಕರ '**ನನ್ನ ಈಚಿನ ಸಮಗ್ರ ಕವಿತೆ**' ಸಂಕಲನದಿಂದ ಆಯ್ದವು. 'ವ್ಯಾಸಮುನೀಂದ್ರ ಸ್ವಗತ' ವಾದ 'ವ್ಯಾಸಭಾಗ್ಯ'ವು ದೈವ ಲೀಲೆಗೊಂದು ದಾರುಣ ನಿದರ್ಶನವಾದ ಮಹಾಭಾರತ ಹಾಗೂ ಯೋಗ, ಜ್ಞಾನ, ಸ್ಥಿತಪ್ರಜ್ಞತೆ, ಆತ್ಮದರ್ಶನಗಳನ್ನುಳ್ಳ ಭಗವದ್ಗೀತೆಯ ಮಹತ್ವವನ್ನು ಎತ್ತಿ ತೋರಿಸುವ ಕಾವ್ಯ. ಅಲ್ಲದೆ, ಎಲ್ಲ ಮುಖ್ಯ ಪಾತ್ರಗಳ ಗುಣಾವಗುಣಗಳ ಬಗ್ಗೆ ವ್ಯಾಸರ ಅನಿಸಿಕೆಯನ್ನೂ ಇಲ್ಲಿ ಕಾಣಿಸಿದೆ. ಆದರೇನು? 'ಈ ವ್ಯಾಸ ಕಾಣಬಲ್ಲವನಹುದು; ಮಾಣಿಸನು

ಏನನೂ!' ದುಡುಕಿನ ದುರಂತ ಕಂಡೂ ತಪ್ಪಿಸಲು ಸಾಧ್ಯವಿಲ್ಲದ ಅಸಹಾಯಕ. ಒಟ್ಟಿನಲ್ಲಿ ಹೊಸಬಗೆಯಲ್ಲಿ ಸಿಂಹಾವಲೋಕನ ಕ್ರಮದಲ್ಲಿ ಸಂಕ್ಷಿಪ್ತವಾಗಿ ಮಹಾಭಾರತವನ್ನು ಇಲ್ಲಿ ಪರಾಮರ್ಶಿಸಿದ್ದಾರೆ. ಮುಖ್ಯ ಘಟನೆಗಳ ಕೊನೆಗೆ ಕೊಡುವ ನೀತಿಗಳು ರೋಚಕ: 'ಕೃಷ್ಣ ನಿಳಿದ ರಥ ಬೂದಿಯಾದುದು – ಬದುಕು ಆತನೊಲಿದರೆ; ಇಲ್ಲ, ಎಲ್ಲವೂ ಭಸ್ಮ' ಎಂಬ ವಿಸ್ಮಯ ಹುಟ್ಟಿಸುತ್ತದೆ. ಯುದ್ಧದಲಿ 'ಗೆದ್ದದ್ದು ಧರ್ಮ, ನಿಜ – ಪಾಂಡವರೆ?' ಅಲ್ಲ! ವ್ಯಾಸ ಕೊನೆಗೆನ್ನುವುದು, 'ತೋಳೆತ್ತಿ ಕೂಗುತಿಹೆ, ಕೇಳುವವರಾರುಂಟು? ಗೆದ್ದವರು ಸೋಲ್ವ, ಸೋತವರು ಸಾಯುವ ವಿದ್ಯಮಾನವೇ ಯುದ್ಧ... ಕಾಳಗವಿರದೆ ಪಡೆದ ಜಯವೆ ವರಿಷ್ಠ!'

**'ಅಹಲ್ಯಾ ಪರೀಕ್ಷಣ'** ಸಣ್ಣ ಖಂಡಕಾವ್ಯ. ಪು.ತಿ.ನ. ಅವರ ಅಹಲ್ಯೆಯನ್ನು ನೆನಪಿಗೆತಂದರೂ, ಅದಕ್ಕಿಂತ ಭಿನ್ನ. ದೇವೇಂದ್ರನಿಗೂ ಸೋಲದ ಪತಿವ್ರತೆ ಅಹಲ್ಯೆ. ಗೌತಮನು ವಿಚಾರಿಸದೆ ನಿರಿಂದ್ರಿಯ ನಾಗು ಎಂದು ಇಂದ್ರನಿಗೂ, 'ಗಾಳಿಯನೆ ಉಣ್ಣುತ್ತ, ಬೂದಿಯಲಿ ಹೊರಳುತ್ತ, ಭೂತಗಳಿಗದೃಶ್ಯಳಾಗಿ ತಪಿಸುತ ಸಾವಿರಾರು ವರ್ಷ ರಾಮ ಬರುವವರೆಗೆ ಇಲ್ಲೆ ವಾಸಿಸುತ್ತಿರು' ಎಂದು ಅಹಲ್ಯೆಗೂ ಶಾಪ ನೀಡುತ್ತಾನೆ. ತನ್ನ ಪಾತಿವ್ರತ್ಯಬಲದಿಂದ ಶಾಪವನ್ನು ವಿಫಲಗೊಳಿಸುವ ಸತ್ವವಿದ್ದರೂ, ಅಹಲ್ಯೆ ಪತಿವಚನಕ್ಕೆ ತಲೆಬಾಗಿ ರೂಪ ವಿಹೀನ ಸ್ಥಿತಿಗೆ ಮರುಗಿ ಅದರ ಬದಲು ಶಿಲೆಯಾಗುತ್ತಾಳೆ! ರಾಮನಿಗೆ ಆತಿಥ್ಯ ನೀಡಿ, ಸ್ವರ್ಗದ ಪರೀಕ್ಷೆಯಲಿ ಮರ್ತ್ಯದುತ್ತೀರ್ಣದಂತೆ ಅರೂಪದಿಂದ ರೂಪಕ್ಕೆ ಸಂಕ್ರಮಿಸುವ ಅಹಲ್ಯೆಯು ರಾಮನಿಗೆ ತಪೋರಕ್ಷೆಯನು ನೀಡಿ, ಶುಭ ಹಾರೈಸುತ್ತಾಳೆ. ಪು.ತಿ.ನ. ಅವರ ಅಹಲ್ಯೆಯ ನೆರಳಲ್ಲ ಇವಳು. ಮಹಾಸತ್ವವನ್ನು ಹೊಂದಿದವಳು.

ಒಟ್ಟಿನಲ್ಲಿ ಎರಡೂ ಕೃತಿಗಳು ಎಲ್ಲರೂ ಮೆಚ್ಚುವಂತಿವೆ. ಮಹಾಕವಿಯ ಸತ್ವವನ್ನು ಹೊಂದಿರುವ ಪ್ರೊ|| ಸಿ.ಪಿ.ಕೆ. ಅವರಿಂದ ಇನ್ನಷ್ಟು ಕಾವ್ಯಕೃತಿಗಳು ಹೊರಬರಲಿ ಎಂದು ಹಾರೈಸೋಣ. ❂

*– ಹೆಚ್. ಪಾಂಡುರಂಗ ವಿಠಲ*

---

# ಯೋಗವಾಸಿಷ್ಠಸಾರ

**'ಯೋಗವಾಸಿಷ್ಠ'**ವು ಅದ್ವೈತ ವೇದಾಂತದ ಬೃಹದ್ ಗ್ರಂಥಗಳಲ್ಲೊಂದು. ಈ ಗ್ರಂಥದಲ್ಲಿ ವಸಿಷ್ಠ ಮಹರ್ಷಿಗಳು ವೇದಾಂತ ತತ್ತ್ವವನ್ನು ಹಲವಾರು ಸುಂದರ ಕಥೆಗಳು ಹಾಗೂ ವಿವರಣೆಗಳ ಮೂಲಕ ವಿವರಿಸುತ್ತಾರೆ. ಇಲ್ಲಿ ರಘುವಂಶದ ಶ್ರೀರಾಮಚಂದ್ರನೇ ಅವರ ಶಿಷ್ಯ. ತೀರ್ಥಯಾತ್ರೆಯಿಂದ ಮರಳಿದ ರಾಮಚಂದ್ರನು ಈ ಪ್ರಪಂಚದ ಮೇಲೆ ತೀವ್ರ ವೈರಾಗ್ಯವನ್ನು ತಾಳುತ್ತಾನೆ. ಜಗತ್ತಿನ ದುಃಖ, ನಶ್ವರತೆ ಹಾಗೂ ಶೂನ್ಯತೆಯನ್ನು ಕಂಡು ಅವನು ಖಿನ್ನನಾಗುತ್ತಾನೆ. ಜಗತ್ತಿನ ಯಾವ ವ್ಯವಹಾರದಲ್ಲಿಯೂ ಆಸಕ್ತಿ ತೋರದೆ ಮೌನಿಯಾಗಿ, ಅಂತರ್ಮುಖಿಯಾಗಿ ಇದ್ದುಬಿಡುತ್ತಾನೆ. ಮಗನ ಈ ನಡವಳಿಕೆಯನ್ನು ಗಮನಿಸಿದ ತಂದೆ ದಶರಥನು, ಶ್ರೀರಾಮನು ಸಂಸಾರವನ್ನು ತ್ಯಾಗ ಮಾಡದ ಹಾಗೆ ಬುದ್ಧಿವಾದ ಹೇಳುವಂತೆ ಕುಲಗುರುಗಳಾದ ವಸಿಷ್ಠಮಹರ್ಷಿಗಳನ್ನು ಪ್ರಾರ್ಥಿಸುತ್ತಾನೆ. ಆಗ ವಸಿಷ್ಠಮಹರ್ಷಿಗಳು ನೀಡಿದ ಉಪದೇಶಗಳನ್ನೊಳಗೊಂಡ ರಾಮಾಯಣದ ಈ ಪ್ರಕರಣವೇ **'ಯೋಗವಾಸಿಷ್ಠ.'**




*ಕೃತಿ* : **ಯೋಗವಾಸಿಷ್ಠಸಾರ**
*ಲೇಖಕಿ* : **ಡಾ.ಕೆ.ಎಲ್. ಪ್ರಸನ್ನಾಕ್ಷೀ**
*ಪ್ರಕಾಶಕರು:* **ಶ್ರೀರಾಮಕೃಷ್ಣ ಆಶ್ರಮ, ಮೈಸೂರು – 570020**
*ಪುಟಗಳು:* **108**, *ಬೆಲೆ*: **40**

ಶ್ರೀರಾಮಕೃಷ್ಣರು ಭಕ್ತರೊಡನೆ ನಡೆಸುತ್ತಿದ್ದ ದೈನಂದಿನ ಸಂಭಾಷಣೆಗಳಲ್ಲಿ, ವಸಿಷ್ಠ ಮಹರ್ಷಿಗಳು ರಾಮಚಂದ್ರನಿಗೆ ನೀಡಿದ ಉಪದೇಶವನ್ನು ಕುರಿತು ಹೇಳುತ್ತಿದ್ದುದು 'ಶ್ರೀರಾಮಕೃಷ್ಣ ವಚನವೇದ'ದಲ್ಲಿ ಹಲವು ಕಡೆ ಹೀಗೆ ಉಲ್ಲೇಖವಾಗಿದೆ: 'ವಸಿಷ್ಠಮಹರ್ಷಿಗಳು ರಾಮನ ಹತ್ತಿರಕ್ಕೆ ಬಂದು ನೋಡುತ್ತಾರೆ. ಆತ ವಿಮನಸ್ಕನಾಗಿ ಕುಳಿತಿದ್ದಾನೆ. ಅಂತರ್ಯದಲ್ಲಿ ತೀವ್ರ ವೈರಾಗ್ಯ ತುಂಬಿ ತುಳುಕಾಡುತ್ತಿದೆ. ವಸಿಷ್ಠರು ಆತನಿಗೆ ಹೇಳುತ್ತಾರೆ : ನೀನು ಸಂಸಾರವನ್ನು ಏಕೆ ತ್ಯಾಗ ಮಾಡಬೇಕು? ಸಂಸಾರ ಭಗವಂತನಿಂದ ಹೊರತಾಗಿದೆಯೇನು? ನನ್ನೊಡನೆ ವಿಚಾರ ಮಾಡಿ ನೋಡು. ಆಗ ರಾಮನ ಅನುಭವಕ್ಕೆ ಬಂತು, ಈ ಜಗತ್ತು ಪರಬ್ರಹ್ಮನಿಂದ ಉದ್ಭವವಾಗಿದೆ ಎಂದು.' *(ಶ್ರೀರಾಮಕೃಷ್ಣ ವಚನವೇದ ಭಾಗ ೧, ಪು. ೩೪೧)*

'ಯೋಗವಾಸಿಷ್ಠ'ದ ವೇದಾಂತ ತತ್ತ್ವಗಳನ್ನೊಳಗೊಂಡ ಸುಮಾರು ೨೨೩ ಶ್ಲೋಕಗಳ ಕಿರು ಸಂಗ್ರಹವೇ **'ಯೋಗವಾಸಿಷ್ಠಸಾರ.'** ರಾಮಕೃಷ್ಣ ಸಂಘದ ಸಂನ್ಯಾಸಿಗಳಲ್ಲೊಬ್ಬರಾದ ಸ್ವಾಮಿ ಧೀರೇಶಾನಂದಜಿಯವರು ೧೯೬೮ರಲ್ಲಿ ಈ ಗ್ರಂಥವನ್ನು ಬಂಗಾಳೀ ಭಾಷೆಗೆ ಅನುವಾದಿಸಿ ಪ್ರಕಟಿಸಿದ್ದರು. ಇದನ್ನು ಕ್ಯಾಲಿಫೋರ್ನಿಯಾದ ವೇದಾಂತ ಸೊಸೈಟಿಯ ಸ್ವಾಮಿ ಸರ್ವದೇವಾನಂದಜಿಯವರು ಆಂಗ್ಲ ಭಾಷೆಗೆ ಅನುವಾದಿಸಿದರು. ಇದು ಚೆನ್ನೈ ರಾಮಕೃಷ್ಣ ಮಠದಿಂದ ಈಗ ಪ್ರಕಟವಾಗಿದೆ. ಈ ಗ್ರಂಥಗಳಿಂದ ಸಂಗ್ರಹಿಸಿ, **'ಯೋಗವಾಸಿಷ್ಠಸಾರ'**ವೆಂಬ ಈ ಕನ್ನಡ ಅವತರಣಿಕೆಯನ್ನು ಡಾ. ಕೆ. ಎಲ್. ಪ್ರಸನ್ನಾಕ್ಷೀ ಅವರು ಸಿದ್ಧಪಡಿಸಿಕೊಟ್ಟಿದ್ದಾರೆ. ಯೋಗವಾಸಿಷ್ಠದಲ್ಲಿರುವ ಅದ್ವೈತ ತತ್ತ್ವಗಳ ಕಿರುನೋಟವನ್ನು ಒದಗಿಸುವಲ್ಲಿ ಈ ಪುಸ್ತಕ ಸಹಾಯಕವಾಗುವುದರಲ್ಲಿ ಸಂದೇಹವಿಲ್ಲ. ❂

*– ಬ್ರಹ್ಮಚಾರಿ ಅನಘಚೈತನ್ಯ*

# ಪುಷ್ಪದಂತ ಮಹರ್ಷಿ

ಕಥೆ: ಅಳಗರಾಜ

ಚಿತ್ರ: ಶಿವರಾಂ

1 ರಾಮೇಶ್ವರದಲ್ಲಿ ಶಿವನನ್ನು ಪೂಜಿಸಿದ ಬಳಿಕ, ಶ್ರೀರಾಮನು ಸೀತೆಯೊಡನೆ ಅಗಸ್ತ್ಯರ ಆಶ್ರಮವನ್ನು ತಲುಪಿದನು. ಅಗಸ್ತ್ಯರು ಶ್ರೀರಾಮನಿಗೆ ತೀರ್ಥಗಿರಿಯಲ್ಲಿರುವ ಯಮತೀರ್ಥದಲ್ಲಿ ಸ್ನಾನ ಮಾಡುವಂತೆ ಸಲಹೆ ನೀಡಿದರು.




ಅಗಸ್ತ್ಯರು ಶ್ರೀರಾಮನಿಗೆ ತೀರ್ಥಗಿರಿಯಲ್ಲಿರುವ ಹನ್ನೆರಡು ಕೆರೆಗಳನ್ನು ಕುರಿತು ವಿವರಿಸಿದರು. ಆಗ ಅವರು ಪುಷ್ಪದಂತನೆಂಬ ಮಹರ್ಷಿಯ ಕಥೆಯನ್ನು ಹೇಳಿದರು :






4 ಪುಷ್ಪದಂತ ಋಷಿಗೆ ಅವನ ಮೇಲೆ ಕರುಣೆ ಉಕ್ಕಿ ಬಂತು. ಅವನನ್ನು ಹೇಗಾದರೂ ಆ ಸಂಕಟದಿಂದ ಪಾರು ಮಾಡಬೇಕೆಂದು ಆತ ನಿರ್ಧರಿಸಿದ.




5




6




7 ಪುಷ್ಪದಂತನಿಗೆ ಕರುಣೆ, ಅನುಕಂಪಗಳು ಉಕ್ಕಿ ಬಂದು, ಅವನೊಂದು ಉಪಾಯವನ್ನು ಹೇಳಿದ.



**8** ಪುಷ್ಪದಂತನು ಆ ಪಾಪಿಯ ಕುಲದಲ್ಲಿ ಜನಿಸಿದ. ಸಕಾಲದಲ್ಲಿ ಅವನು ತೀರ್ಥಗಿರಿಗೆ ಹೋದ. ಯಮತೀರ್ಥದಲ್ಲಿ ಪುಣ್ಯಸ್ನಾನ ಮಾಡಿ, ಶಿವನನ್ನು ಪೂಜಿಸಿದ.




**9** ಪುಷ್ಪದಂತನ ತಪಸ್ಸಿನ ಫಲವಾಗಿ ಶಿವನ ಗಣಗಳು ನರಕಕ್ಕೆ ಹೋಗಿ ಆ ಪಾಪಿಯನ್ನು ಬಿಡುಗಡೆ ಮಾಡಿದರು. ಆತನು ತನ್ನ ಪಾಪವನ್ನೆಲ್ಲ ಕಳೆದುಕೊಂಡು, ಶಿವನ ಗಣದಲ್ಲಿ ಒಬ್ಬನಾದ.



**10**




ಆತ ಶಿವನ ಗಣವನ್ನು ಸೇರಿಕೊಂಡ ವಿಷಯ ಪುಷ್ಪದಂತನಿಗೆ ತಿಳಿಯಲಿಲ್ಲ. ಆತ ಆ ಪಾಪಿಯನ್ನು ಅರಸುತ್ತಾ ನರಕಕ್ಕೆ ಹೋದ. ಅಲ್ಲಿ ಅವನನ್ನು ಕಾಣದೆ ಕೈಲಾಸಕ್ಕೆ ಹೋದ.

11

ದೇವಾ! ನೀನು ಹೇಳಿದ ಎಲ್ಲ ಕಾರ್ಯಗಳನ್ನು ನಾನು ಮಾಡಿದೆ. ಆದರೆ ಅ ಪಾಪಿಯ ಗತಿಯೇನಾಯಿತು ಎಂದು ಅನಂತರ ನನಗೆ ತಿಳಿಯಲಿಲ್ಲ.

ಪುಷ್ಪದಂತ! ನೀನು ನನ್ನನ್ನೇ ನೆನೆಯುತ್ತಾ ಯಮತೀರ್ಥದಲ್ಲಿ ಸ್ನಾನ ಮಾಡುತ್ತಿದ್ದೆ, ಆಗಲೇ ಅವನಿಗೆ ಕ್ಷಮೆ ದೊರಕಿತು. ಅವನು ಈಗ ಶಿವಗಣದಲ್ಲಿ ಒಬ್ಬನಾಗಿದ್ದಾನೆ.

ಓ! ಹೌದೆ? ನಿನ್ನ ಅಪಾರ ಕರುಣೆ ಅವನನ್ನು ರಕ್ಷಿಸಿತು, ದೇವಾ!

12



ಪುಷ್ಪದಂತನ ಕಥೆಯನ್ನು ಕೇಳಿ ಸೀತೆಗೆ ಅತ್ಯಂತ ಆನಂದವಾಯಿತು. ರಾಮ, ಸೀತೆ ಇಬ್ಬರೂ ಯಮತೀರ್ಥದಲ್ಲಿ ಪುಣ್ಯಸ್ನಾನ ಮಾಡಿ, ಶಿವನ ಅನುಗ್ರಹವನ್ನು ಪಡೆದರು.

13



ಜಗತ್ತಿಗೆ ಬೆಳಕನ್ನು ಯಾರು ನೀಡುವರು? ಹಿಂದಿನ ಕಾಲದಲ್ಲಿ ಬಲಿದಾನವೇ ನಿಯಮವಾಗಿತ್ತು. ಮುಂದೆಯೂ ಅದೇ ನಿಯಮವಾಗಿರುವುದು. ಬಹುಜನರ ಹಿತಕ್ಕಾಗಿ, ಬಹುಜನರ ಸುಖಕ್ಕಾಗಿ ಭೂಮಿಯ ಮೇಲೆ ಅತ್ಯುತ್ತಮರಾದ, ವೀರರಾದ ಕೆಲವು ಮಂದಿ ತಮ್ಮ ಸರ್ವಸ್ವವನ್ನೂ ಸಮರ್ಪಿಸಿಕೊಳ್ಳುವರು. ಅನಂತ ಪ್ರೀತಿ, ಅನುಕಂಪಗಳಿಂದ ಕೂಡಿದ ನೂರಾರು ಮಂದಿ ಬುದ್ಧನಂತಹ ಮಹಾಪುರುಷರು ಬೇಕಾಗಿದ್ದಾರೆ.

**– ಸ್ವಾಮಿ ವಿವೇಕಾನಂದ**

ಸುದ್ದಿ ಸಂಚಯ

# ನಾಡಿನೆಲ್ಲೆಡೆ 'ರಾಷ್ಟ್ರೀಯ ಯುವ ದಿನ'ದ ಆಚರಣೆ



ಶ್ರೀರಾಮಕೃಷ್ಣ ಆಶ್ರಮ, ಮೈಸೂರು

೨೦೧೬ರ ಜನವರಿ ೧೨ ರಂದು ನಾಡಿನೆಲ್ಲೆಡೆ **ರಾಷ್ಟ್ರೀಯ ಯುವ ದಿನಾಚರಣೆ**ಯನ್ನು ಉತ್ಸಾಹ, ಶ್ರದ್ಧೆಗಳಿಂದ ಆಚರಿಸಲಾಯಿತು. ರಾಮಕೃಷ್ಣ ಮಠ ಹಾಗೂ ಮಿಷನ್ನಿನ ಅನೇಕ ಶಾಖಾಕೇಂದ್ರಗಳಲ್ಲಿ ಇದರ ಸಲುವಾಗಿ ಅನೇಕ ಕಾರ್ಯಕ್ರಮಗಳು ನಡೆದವು. ಈ ಕುರಿತು ಸಂಕ್ಷಿಪ್ತ ವರದಿ:

**ದೆಹಲಿ:** ಶಾಲಾ ವಿದ್ಯಾರ್ಥಿಗಳಿಗಾಗಿ '**ರಸಪ್ರಶ್ನೆ**' ಕಾರ್ಯಕ್ರಮವನ್ನು ನಡೆಸಲಾಯಿತು. ಇದರಲ್ಲಿ ಸುಮಾರು ೮೫,೦೦೦ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದರು. **ಮದುರೈ:** ವಿದ್ಯಾರ್ಥಿಗಳಿಗಾಗಿ ನಡೆಸಲಾದ ಪ್ರಬಂಧ ಸ್ಪರ್ಧೆಯಲ್ಲಿ ತಮಿಳುನಾಡಿನ ೧೩೩ ವಿದ್ಯಾಸಂಸ್ಥೆಗಳಿಂದ ಬಂದ ಸುಮಾರು ೧೬೮೦೦ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದರು. **ನಾಗಪುರ:** ವಿವಿಧ ಸಾಂಸ್ಕೃತಿಕ ಸ್ಪರ್ಧೆಗಳಲ್ಲಿ ಸಮೀಪದ ೧೫೦ ಶಾಲೆಗಳಿಂದ ಬಂದ ೧೧೯೬ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದರು. **ರಾಜ್‌ಕೋಟ್:** ಆಶ್ರಮವು ನಡೆಸಿದ ಸಾಂಸ್ಕೃತಿಕ ಸ್ಪರ್ಧೆಗಳಲ್ಲಿ ಸಮೀಪದ ೧೫೦ ಶಾಲೆಗಳಿಂದ ಬಂದ ೪,೮೦೦ ಮಂದಿ ವಿದ್ಯಾರ್ಥಿಗಳು ಭಾಗವಹಿಸಿದರು. **ವಡೋದರಾ** ಆಶ್ರಮವು ನಡೆಸಿದ '**ರಸಪ್ರಶ್ನೆ**' ಕಾರ್ಯಕ್ರಮದಲ್ಲಿ ೧,೧೯ ಶಾಲೆಗಳ ೧,೦೧,೪೦೬ ವಿದ್ಯಾರ್ಥಿಗಳು ಭಾಗವಹಿಸಿದರು. **ವಿಶಾಖಪಟ್ಟಣಂ** ಆಶ್ರಮದ ವತಿಯಿಂದ ಆಂಧ್ರ ವಿಶ್ವವಿದ್ಯಾಲಯದಲ್ಲಿ ನಡೆದ ಯುವ ಸಮ್ಮೇಳನ ಕಾರ್ಯಕ್ರಮದಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿಗಳಾದ ಶ್ರೀ ಚಂದ್ರಬಾಬು ನಾಯ್ಡು ಅವರು ಭಾಗವಹಿಸಿ ಮಾತನಾಡಿದರು. ಸುಮಾರು ೩೦೦೦ ಮಂದಿ ಯುವಕರು ಕಾರ್ಯಕ್ರಮದಲ್ಲಿ ಪಾಲ್ಗೊಂಡರು.




ರಾಮಕೃಷ್ಣ ಮಿಷನ್ ಆಶ್ರಮ, ವಿಶಾಖಪಟ್ಟಣಂ

ರಾಮಕೃಷ್ಣ ಮಠ ಹಾಗೂ ಮಿಷನ್ನಿನ ಪ್ರಧಾನ ಕೇಂದ್ರವಾದ ಬೇಲೂರು ಮಠವಲ್ಲದೆ, ಈ ಕೆಳಗಿನ ಶಾಖಾಕೇಂದ್ರಗಳು ಮೆರವಣಿಗೆ, ಭಾಷಣ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ಯುವ ದಿನಾಚರಣೆಯನ್ನು ಆಚರಿಸಿದವು: ರಾಮಕೃಷ್ಣ ಶಾರದಾಪೀಠ (ಬೇಲೂರು ಮಠ), ಅಗರ್ತಲಾ, ಅಸಂಸೋಲ್, ಅಲಹಾಬಾದ್, ಆಂಟ್‌ಪುರ್, ಔರಂಗಾಬಾದ್, ಬಾಗ್‌ಬಜಾರ್, ಬೆಂಗಳೂರು, ಭೋಪಾಲ, ಭುವನೇಶ್ವರ, ಚಂಡೀಗಢ, ಛಾಪ್ರಾ, ಚೆಂಗಲ್‌ಪಟ್ಟು, ಚೆನ್ನೈ ಮಠ, ಚೆನ್ನೈ ಮಿಷನ್ ಆಶ್ರಮ, ಕೊಯಮತ್ತೂರು ಮಠ, ಕೊಯಮತ್ತೂರು ಮಿಷನ್, ಕೊಂಟೈ, ಕೂಚ್‌ಬಿಹಾರ್, ದಾರ್ಜಿಲಿಂಗ್, ಡೆಹ್ರಾಡೂನ್, ದೇವಘರ್, ಗದಾಧರ ಆಶ್ರಮ, ಗರ್ಬೆಟಾ, ಘಾಟ್‌ಶಿಲಾ, ಗುವಾಹಟಿ, ಹಲಸೂರು, ಹಾತಮುನಿಗುಡ, ಹೈದರಾಬಾದ್, ಜೈಪುರ, ಜಲಪ್ಯಾಗುಡಿ, ಜಮ್ಮು, ಜಮ್‌ಶೆಡ್‌ಪುರ, ಜಂತಾರ, ಕಡಪ, ಕಾಮಾರಪುಕುರ, ಕಾಂಕುರಗಾಚಿ, ಕಾನ್‌ಪುರ, ಕರೀಂಗಂಜ್, ಕಾಟಿಹಾರ್, ಲಿಂಬ್ಡಿ, ಮಲ್ಯಂಕರಣೆ, ಮಾನಸದ್ವೀಪ, ಮಂಗಳೂರು, ಮೇದಿನೀಪುರ, ಮೇಖಲಿಗಂಜ್, ಮುಂಬಯಿ, ಮೈಸೂರು, ನೌರಾ, ನಾರಾಯಣಪುರ, ನರೇಂದ್ರಪುರ, ನರೋತ್ತಮನಗರ, ನಟ್ಟರಾಂಪಲ್ಲಿ, ಪಾಟ್ನಾ, ಪೊನ್ನಂಪೇಟೆ, ಪೋರ್‌ಬಂದರ್, ಪೋರ್ಟ್ ಬ್ಲೇರ್, ಪುರಿ ಮಠ, ಪುರಿ ಮಿಷನ್, ಪುರುಲಿಯಾ, ರಹರಾ, ರಾಜಾಮುಂಡ್ರಿ, ರಾಮಹರಿಪುರ, ರಾಂಚಿ, ಸೇಲಂ, ಸಾರಗಾಛಿ, ಸೇವಾ ಪ್ರತಿಷ್ಠಾನ, ಶಿಲ್ಲಾಂಗ್, ಸಿಕ್ರಾ-ಕುಲೀನಗ್ರಾಮ, ಸಿಲ್‌ಚಾರ್, ಸ್ವಾಮೀಜಿ ನಿವಾಸ, ತಾಮಲುಕ್, ತಿರುವನಂತಪುರ, ತ್ರಿಚೂರು, ತಿರುಪತಿ ಹಾಗೂ ವಿಜಯವಾಡ.



ರಾಮಕೃಷ್ಣ ಮಠ, ರಾಜಾಮುಂಡ್ರಿ

### ಮೈಸೂರು ಶ್ರೀರಾಮಕೃಷ್ಣ ಆಶ್ರಮ

ಮೈಸೂರಿನ ಶ್ರೀರಾಮಕೃಷ್ಣ ಆಶ್ರಮವು ತನ್ನ ಅಂಗಸಂಸ್ಥೆಗಳಾದ ರಾಮಕೃಷ್ಣ ವಿದ್ಯಾಶಾಲಾ, ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಶಿಕ್ಷಣ ಸಂಸ್ಥೆ – ಇವುಗಳೊಂದಿಗೆ '**ರಾಷ್ಟ್ರೀಯ ಯುವ ದಿನ**'ವನ್ನು ಆಚರಿಸಿತು. ನಗರದ ಚೆಲುವಾಂಬಾ ಪಾರ್ಕಿನ ಬಳಿಯಲ್ಲಿರುವ ಸ್ವಾಮಿ ವಿವೇಕಾನಂದರ ಮೂರ್ತಿಗೆ ಹಾರಾರ್ಪಣೆ ಮಾಡಿದ ಬಳಿಕ ಅಲಂಕೃತವಾದ ರಥದಲ್ಲಿ ಸ್ವಾಮೀಜಿ ಭಾವಚಿತ್ರದ ಮೆರವಣಿಗೆ ನಡೆಯಿತು. ನಗರದ ೫೦ ವಿದ್ಯಾಸಂಸ್ಥೆಗಳಿಂದ ಬಂದಿದ್ದ ಸುಮಾರು ೨೫೦೦ ಮಂದಿ ವಿದ್ಯಾರ್ಥಿಗಳು ಮೆರವಣಿಗೆಯಲ್ಲಿ ಪಾಲ್ಗೊಂಡಿದ್ದರು. ಮೈಸೂರು ಆಶ್ರಮದ ಅಧ್ಯಕ್ಷರಾದ ಸ್ವಾಮಿ ಮುಕ್ತಿದಾನಂದಜಿ, ಕಂದಾಯ ಸಚಿವರಾದ ಶ್ರೀ ಶ್ರೀನಿವಾಸ ಪ್ರಸಾದ್, ಶಾಸಕರಾದ ಶ್ರೀ ವಾಸು ಮುಂತಾದವರು ಮೆರವಣಿಗೆಯಲ್ಲಿ ಭಾಗವಹಿಸಿದರು.

Managing Editor : Swami Muktidananda     Editor : Swami Jnanayogananda
Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

